# ಚಂದ್ರಾವಲಿ ವಿಲಾಸಂ.

ಕೆನರಾ ಹ್ಯಾಸ್ಕೂಲ್ ಕರ್ಣಾಟಕ ಪಂಡಿತ

ಎಮ್. ತಿಮ್ಮಪ್ಪಯ್ಯನವರಿಂದ

ವಿರಚಿಸಲ್ಪಟ್ಟದು.

ಪ್ರಥಮ ಮುದ್ರಣ ೧೦೦೦ ಪ್ರತಿಗಳು.

— ೧೦೦ —

ಶಾರದಾ ಛಾಪಖಾನೆಯಲ್ಲಿ ಛಾಪಿಸಲ್ಪಟ್ಟಿತು.

TO

M. R. Ry. P. Bhoja Rao, Avl., B. A.

IN TOKEN OF

HIGH ESTEEM AND OF GRATITUDE FOR HELP RECEIVED

THIS WORK IS RESPECTFULLY INSCRIBED BY

*The Author.*

# ಪ್ರಸ್ತಾವನೆ.

**ಮಹಾಶಯರೇ!**

ನಾನು ಅತಿಶಯವಾದ ವೈದಗ್ಧ್ಯವನ್ನೂ, ಕಾವ್ಯರಚನಾ ಕೌಶಲ್ಯವನ್ನೂ ಹೊಂದಿದವನಲ್ಲ; ಆದರೂ ದೈವವಶಾತ್ ಒದಗಿದ ಅಲ್ಪವಾದ ಕವಿತಾಜ್ಞಾನವನ್ನು ತನ್ಮಾರ್ಗದಲ್ಲಿ ಪ್ರಯೋಗಿಸದಿದ್ದರೆ, ಕಾನನಕೌಮುದಿಯಂತೆ ನಿಷ್ಫಲವಾಗುವುದೆಂದೂ, ಮಹತ್ಪಥಾನುಸರಣವು ಶ್ರೇಯಸ್ಕರವೆಂದೂ ಎಣಿಸಿ, **ಶ್ರೀ ಕೃಷ್ಣನು** ಪರದಾರಾಭಿಗಮನವನ್ನು ಮಾಡಿದನೆಂಬ ಅಪವಾದಾರೋಪಣಕ್ಕೆ ಕಿವಿಗುಡುವವರ ಮನೋರೋಗ ನಿವಾರಣಾರ್ಥವಾಗಿ **"ಚಂದ್ರಾವಳಿ ವಿಲಾಸಂ"** ಎಂಬ ಈ ಗ್ರಂಥವನ್ನು ಗದ್ಯರೂಪವಾಗಿ ಬರೆದಿರುವೆನು. ಇದು "ಅದ್ಭುತರಾಮಾಯಣ" "ರಾಮಾಶ್ವಮೇಧ"ಗಳೆಂಬ ಆರಾಮಗಳಲ್ಲಿ ವಿಹರಿಸಲಿಚ್ಛಿಸುವವರಿಗೆ ಪ್ರವೇಶ ದ್ವಾರವಾಗಿದೆ. ಮತ್ತು ಸರಳಪದಗರ್ಭಿತವಾಗಿಯೂ, ಶೃಂಗಾರ ರಸಪ್ರಧಾನವಾಗಿಯೂ, ಪ್ರಥಮಾವಲೋಕನದಲ್ಲೆ ವಾಚಕರ ಮನಸ್ಸಿಗೆ ಅವಗಾಹವಾಗುವಂತೆಯೂ ಇದೆ. ಇದರ ಮುದ್ರಣ ವಿಷಯದಲ್ಲಿ ಪೂರ್ಣ ಸಹಾಯವನ್ನು ಮಾಡಿ ನನ್ನ ಪ್ರಯತ್ನವನ್ನು ಸಫಲವನ್ನಾಗಿ ಮಾಡಲು ಪ್ರೋತ್ಸಾಹಿಸಿದ ಮ. ರಾ. ರಾ. ಮುನ್ಸಿಪಲ್ ಕೌನ್ಸಿಲರ್ ಪಿ. ಭೋಜರಾಯರು, ಬಿ. ಎ., ಇವರ ಉಪಕೃತಿಯು ಚಿರಸ್ಮರಣೀಯವಾಗಿದೆ. ಮತ್ತು ಇದರ ಶುದ್ಧಾಶುದ್ಧಪತ್ರಿಕೆಯನ್ನು ಸಿದ್ಧಪಡಿಸಲಿಕ್ಕೂ ಅಲ್ಲಲ್ಲಿನ ವಿಷಯಸ್ಖಾಲಿತ್ಯಗಳನ್ನು ಸರಿಪಡಿಸಲಿಕ್ಕೂ ತನ್ನ ಅಮೌಲ್ಯವಾದ ಸಮಯವನ್ನು ಉಪಯೋಗಿಸಿ ಸಹಾಯಮಾಡಿದ ಮಂಗಳೂರು ಕೆನರಾ ಹೈಸ್ಕೂಲ್ ಉಪಾಧ್ಯಾಯರು, ಮ. ರಾ. ರಾ. ಕೆ. ಪಿ. ಪದ್ಮನಾಭಯ್ಯನವರು ಬಿ. ಎ., ಎಲ್. ಟಿ., ಇವರಿಗೆ ತುಂಬಾ ಕೃತಜ್ಞನಾ

ಗಿರುತ್ತೇನೆ. ಈ ಕೃತಿಯಲ್ಲೇನಾದರೂ ದೋಷಗಳಿದ್ದರೆ "ಗಚ್ಛತಃ ಸ್ಖಲನಂ ನದೋಷಾಯ' ಎಂಬ ವಚನವನ್ನನುಸರಿಸಿ ದಯವಿಟ್ಟು ಆ ದೋಷಗಳನ್ನು ತಿಳಿಸಿದ ಭಾಷಾಭಿಮಾನಿಗಳಾದ ಮಹನೀಯರ ವಾಕ್ಯಗಳನ್ನು ಶಿರಸಾವಹಿಸಿ ಮುಂದಣ ಮುದ್ರಣದಲ್ಲಿ ಸರಿಪಡಿಸುವೆನು.

ಮತ್ತು

|| ಕಂದ || ಬೆರಲಂ ಸಿಡಿಯಲಿ ಪೊಗಳಲಿ |
ಧರೆಯೊಳ್ ತಂತಮ್ಮ ಪುಟ್ಟುಗುಣದಂದದೊಳಾ |
ನೆರಡರೊಳುಂ ಮುದಮಾಂಪೆಂ |
ಇರುಳುಂ ಪಗಲುಂ ನರಂಗೆ ಸುಖಕರಮಲ್ತೆ? ||

ಇತಿ ಸಜ್ಜನ ಚರಣಾಬ್ಜಭೃಂಗಃ

**ಗ್ರಂಥಕಾರಃ**



ಶ್ರೀಃ

# ಚಂದ್ರಾವಲೀವಿಲಾಸಂ.



ಓವೋ ತಣ್ಗಾಳಿಯ ಪೆಂಪೆ! ಅದೋ ವೇಣುವಿನ ಮಧುರಸ್ವರದಿಂ ಓರೊರ್ಮೆ ತಿರುಗುತ್ತಂ ದಾಕ್ಷಿಣ್ಯಯುಕ್ತಂ ಪರಿಮಳಮಂ ಬೀರುತ್ತಂ ಮೆಲ್ಲನೆ ಸಂಚರಿಸುಗುಂ. ಇದೋ ಬಳ್ಳಿವೆಣ್ಗಳ್ ಚಂಚಲಾಂಗಿಯರಪ್ಪರ್. ಸೂಕ್ಷ್ಮಂ ಅತಿಸೂಕ್ಷ್ಮಂ ಚಿಗುರ್ವೆರಲ್ಗಳಿಂ ಬಾಬಾಯೆಂದು ಸನ್ನೆಗೈವರ್. ಮೇಣುಂ ಸುಮನೋರಾಗಂದಾಳ್ದು ಮೋಹಿಸಿ ತುಂಬಿಸರದಿಂ ಕರೆವರ್. ಯೋಚಿಸಿದೊಡೆ ಸರ್ವವ್ಯಾಪಿಯಾದೊಡುಂ ಲತಾಂಗಿಯರ್ಗೆ ಎರಗದೆ ಉಳಿಯನೆಂಬುದಂ ತಿಳಿಸಲೆಂಬವೊಲ್ ಈ ಮಾರುತಂ ಲತಾಂಗಕೆರಗುವಂ ನೋಡೆಲೆ ಕಾಂತಾಮಣಿ! ಎಂದು ಕಬ್ಬಿಗರಾಳ್ದಂ ಮೊಗಸಾಲೆಯುಯ್ಯಾಲೆಯ ಮನೋಹಾರಿಣಿಯಪ್ಪ ಭಾರತಿಗೊರೆವುತಿರ್ದಂ—

**ಭಾರತಿ**—ಕೇಳೆನ್ನ ಸೊಬಗುವಳ್ಳಿಯ ಮರವೆ! ಮನಮಿದು ಇನ್ನುಂ ನಿನ್ನ ಕಥಾಮೃತಮಂ ಪೀರಲ್ ಆತುರದೊಳಿರ್ಪುದು; ಈ ಮಂದ ಮಾರುತನುಂ ತನ್ನ ಬೆಡಂಗಿಂ ಶ್ರೀಕೃಷ್ಣನಂ ನೆನೆಯಿಪಂ. ಆದರಿಂ ಆ ಶ್ರೀಕೃಷ್ಣವಿಲಾಸದೊಳೇನಾನುಮೊಂದು ಕತೆಯಂ ಪೇಳ—

ಕಬ್ಬಿಗರಾಣ್ಮಂ—ಪೇಳ್ವೆನೆನ್ನ ಆನಂದಸ್ವರೂಪಿಣಿ! ಆದೊಡೆ ಶ್ರೀಕೃಷ್ಣವಿಲಾಸದೊಳಾವ ಕತೆಯಂ?

ಭಾರತಿ—ನೀಂ ರಾಧಾವಿಲಾಸಮಂ ಪೇಳ್ದ ಬಳಿಯಂ ಕೃಷ್ಣನಿನ್ನೊರ್ವಳಂ ವರಿಸಿದ ಕತೆಯಂ ಪೇಳ್ವೆನೆಂದೆಯಲ್ತೆ? ಅದನೆ ನಲ್ಮೆಯಿನೊರೆದೊಡಾಯ್ತು.

**ಕಬ್ಬಿಗಂ** — ಇನ್ನೊರ್ವಳನೆಂದೊಡೆ ಆರಂ? ಅದೆನಗೆ ನೆನಂಬರಿಕೆ ಯಿಲ್ಲಂ.

**ಭಾರತಿ** — ಅವಳ್ ಆ ರಾಧೆಯ ತಂಗೆ, ಆಕೆಯ ಪೆಸರ್ ಇದೋ ಬಸಿಗುರ್ಟಿಂಟು ಬಾಯ್ಗಿಲ್ಲಂ—

**ಕಬ್ಬಿಗಂ** — ಕಾಂತೆ! ಓವೊ! ಅರಿತೆನರಿತೆಂ, ಚಂದ್ರಾವಳಿಯ ಕತೆಯಲ್ತೆ?

**ಭಾರತಿ** — ಎನ್ನರಸ, ಅಪ್ಪುದಪ್ಪುದು ; ಅದನೆ ಪ್ರಿಯಮಿಟ್ಟು ಪೇಳ್ದೊಡೆ ಪೆಣ್ಣಿನ ಒಂದಾಸೆ ಪೂರ್ತಿಯಕ್ಕುಂ.

**ಕಬ್ಬಿಗಂ**—.ಪೇಳ್ದಪೆನೆಲೆ ಕಾಂತಾಮಣಿ! ಇದರ್ಕಿನಿತುಂ ಉಪಚಾರಮೆ? ಮನಮಿಟ್ಟಾಲಿಸು, ಭಗವಂತಂ ಅನಂತಶಯನಂ ಧಾತ್ರೀಭಾರಮಂ ತಿರ್ದಲೆಂದು ಮಥುರೆಯೊಳ್ ಕಂಸನ ಸೆರೆಯೊಳಿರ್ಪ, ಅದಿತಿ ಕಶ್ಯಪರ ಅವತಾರಿಗಳಪ್ಪ, ದೇವಕೀವಸುದೇವರ್ಗೆ ಸಂಭವಿಸಿ, ಕಾರ್ಯಾಂತರದಿಂ ಗೋಕುಲದೊಳ್ ನಂದಂಗೆ ಮಗನಂತೆ ನಟಿಸಿ, ಪಲವುಂ ಅಲೌಕಿಕಕೃತ್ಯಂಗಳಂ ಮಕ್ಕಳಾಟದ ಮಾಳ್ಕೆಯಿಂ ಮಾಡುತ್ತಂ, ಗೋವಳಿತಿಯರ್ಗೈದ ಪುಣ್ಯಫಲಮನೆಂಬಂತೆವೊಲ್ ತನ್ನೊಲ್ಮೆಯುಂ ಅವರೊಳ್ ಬೀರುತ್ತಮಿರ್ದಂ ಎಂಬುದಂ ಮೊದಲೆ ಪೇಳ್ದೆನಲ್ತೆ. ಬಳಿಯುಮುಂ ಎಂತಪ್ಪರಾದೊಡುಂ ಕುಲಕ್ರಮಮಂ ಬಿಡಲಾಗದೆಂಬುದಂ ಇಳೆಗೆ ತಿಳಿಸಲೆಂಬಂತೆ ಗೋವಳರೊಡನೆ ಗೋವ್ಗಳಂ ಪೊರೆವುತ್ತುಮಿರ್ದಂ.

ಓರೊರ್ಮೆ ಶ್ರೀಕೃಷ್ಣಂ ಒಂದು ಮಹಾವೃಷಭವಂ ಏರ್ದು, ಓ ಕೆಳೆಯರಿರ! ಆ ವೃಷಭವಾಹಂಗುಂ ಎನಗುಂ ಏಂ ಭೇದಂ, ಎಂದು ಕೇಳ್ವಂ. ಪಲರ್ಮೆ ಆ ಕಾಳಿಂಗನ ಪೆಡೆಯೊಳ್ ನಲಿದ ಎನಗುಂ ಶೇಷತಲ್ಪನಪ್ಪ ವಿಷ್ಣುವಿಗುಂ ಏಂ ವ್ಯತಿರೇಕಂ ಎಂಬಂ.

ಈ ಪರಿಯೊಳ್ ಬಾಲಚೇಷ್ಟೆಯ ನೆವದಿಂ ತನ್ನ ಯಥಾರ್ಥತೆಯಂ ಜಗಕೆ ತಿಳಿಸುತ್ತಂ ಬಿನದಿಸುತೆ ಸಂತಸದ ಏಳ್ಗೆಯಿಂ ಓರೊರ್ಮೆ ಮುರಲಿ

ಯಂ ಬಾಜಿಸಿದನಾದೊಡೆ ಮನುಜರೆಲ್ಲರುಂ ಇರ್ಕೆ; ಪಸುಗಳುಂ ಮೇವಂ ನೀರಂ ತೊರೆದು ಬೇರೆಣಿಕೆಯುಂ ಮರೆತು ಆಲಿಸುತ್ತಂ ಇರ್ದುವು. ಕೊಡ ವಾಲಂ ಕರೆವುವು. ಪಲವೇಂ? ಬಾಯ್ಗೂಡದ ಸೊರ್ಕುಂ ಬೋರಿಗಳ ನುಂ ಒಂದು ನೆಲೆಯೊಳ್ ನಿಲಿಸಲುಂ ಕೊಳಲ ಸವಿಸೊರವೇಸಾಯು ಮಾಯ್ತಲ್ಲದೆ, ಬೇರಾವುದುಂ ಅನಾವಶ್ಯಕಮೆಂದಾಯ್ತು. ವ್ಯೈಮರ ಆಶ್ರಯಮಿರ್ದೊಡೆ ಏನಸಾಧ್ಯಂ? ಆ ವೇಣುವಿಗುಂ ಸಾಮರ್ಥ್ಯಂ ಅನಿತುಂ ಒದವಿತಲ್ತೆ!

ಭಾರತಿ—ಎಲೆನಲ್ಲ! ವೀಣಾದಿಗಳ್ ಪಲವುಂಬಗೆಯ ವಾದ್ಯಂಗಳ್ ಇರಲ್ ವಾಸುದೇವಂ ಈ ವೇಣುವಾದ್ಯಮನೆ ಪಿಡಿಯಲ್ ಏನಾನುಂ ಕಾರಣಮುಂಟೆ?

ಕಬ್ಬಿಗಂ—ಕೇಳೆನ್ನರಸಿ, ಕಾರಣಮಿಲ್ಲದೆ ಕಾರ್ಯಮೇನೊದವು ಗುಮೆ? ಪೇಳ್ವೆಂ ಈ ನೆಲದೊಳ್ ಪಿಂತೊರ್ವಂ ಸುಶರ್ಮನೆಂಬ ವಿಪ್ರಂ ಬ್ರಾಹ್ಮಣ ವರ್ಣಮಾಲೆಯ ಶಿಖಾಮಣಿಯೆನೆ ರಾರಾಜಿಸುತ್ತಮಿರ್ದಂ. ಆ ತಂಗೆ ರೂಪಿನ, ಮೇಣ್, ಸದ್ವಿದ್ಯೆಯ ಬಿತ್ತೆಂಬಂತೆ ಉದಿಸಿ ರತಿಸುಂದರಿ ಯಾಗಿಯುಂ ಸಕಲಕಲಾವತಿಯಾಗಿಯುಂ ಏಳ್ಗೆಯೊಂದುವ ವೇಣುವೆಸರ ಮಗಳೊರ್ವಳುಮುಂಟು. ಅಂತಾಕೆಗೆ ಪೊಸಜೌವನನುಂ ಅಂಕುರಿಸೆ.

ಸುಶರ್ಮಂ—ಎಲೆ ಮಗಳೆ! ನೀಂ ಬುದ್ಧಿಯುಂ ಬಿಜ್ಜೆಯುಂ ಇಲ್ಲದ ನಾಡ ಪೆಣ್ಗಳಂತಲ್ಲಂ, ಓರೊರ್ಮೆ ಎನಗುಂ ಬುದ್ಧಿವೇಳಲಿಪ್ಪ ವಳ್ (ಎಂಬನಿತರೊಳ್).

ವೇಣು—(ಲಜ್ಜೆಯಿಂ) "ಅಪ್ಪ! ಇದೇಂ ಅಪರಿಚಿತರೊಳ್ ಗೈವಂತೆ ಮಗಳೊಳುಂ ಇನಿತುಂ ವಿನಮಿಲ್ಲದ ಉಪಚಾರಂ?"

ಸುಶರ್ಮಂ—ಮಗಳೆ! ಇಪ್ಪುದನೆ ಪೇಳ್ದೊಡೆ ಏನುಪಚಾ ರಮೆ? ಅಪ್ರಕೃತಮಂತೆ ಪೋಕೆ. ನಿನ್ನಂಗಂಗಳುಂ ಅಂಗಭಂಗಿಗಳುಂ ಗೃಹಿಣೀತ್ವಮುಂ ಪೊಂದಲ್ವೇಳ್ಕುಮೆಂಬ ಭಾವಮಂ ಸೂಚಿಪುವು. ಅದರಿಂ ನಿನ್ನ ಮನಃಪ್ರಿಯನಪ್ಪವಂ ಆವ ಲಕ್ಷಣದವಂ ಆಗಲ್ವೇಳ್ಕುಮೆನೆ.

ವೇಣು—(ನಾಣಿಂತಲೆವಾಗಿ ಬರಿದೆ ಇರ್ದಳ್).

ಸುಶರ್ಮಂ—ಮಗಳೆ ಲಜ್ಜೆಯಂತಾಳದಿರ್. ನೀಂ ಪೇಳದೊಡೆ ನಿನ್ನ ಅಂತರ್ಯಮಂ ಆನೆಂತರಿವೆಂ. "ಭಿನ್ನರುಚಿರ್ಹಿಲೋಕಃ" ಎಂಬುದಂ ನೀನೇನರಿಯದಳೆ?

ವೇಣು—(ಲಜ್ಜೆಯಂ ಎಂತಾನುಂ ಸೈಸಿ) ತಾತ! ಇದೇಂ ನೀನರಿಯದರವೊಲ್ ಕೇಳ್ವುದು? ಪಿತಂ ಬಾಲ್ಯದೊಳ್, ಪತಿ ಪ್ರಾಯದೊಳ್, ಸುತಂ ವಾರ್ಧಿಕ್ಯದೊಳ್ ರಕ್ಷಕನಲ್ಲದೆ ಅಬಲೆಯರ್ಗೆ ಏಂ ಸ್ವತಂತ್ರ ಮಿರ್ಪುದೆ? ಅಂತುಮಲ್ಲದೆ ಸ್ವಯಂವರಮದು ರಾಜಕೀಯಮಲ್ತೆ.

ಸುಶರ್ಮಂ—ಮಗಳೆ! ಪಿತಂ ಬಾಲ್ಯದೊಳ್ ಪಾಲಕಂ; ಅಂತಿರಲ್ ನಿನಗೆ ಈ ಜೌವನದೊಳುಂ ಆನೆಂತು ಪಾಲಕನಪ್ಪೆಂ?

ವೇಣು—ಅಪ್ಪ! ತಂದೆಯೆಡೆಯ ಮಕ್ಕಳ್ಗೆ ಎಂದುಂ ಬಾಲ್ಯಾವಸ್ಥೆಯೆ.

ಸುಶರ್ಮಂ—ಪುತ್ರಿಯೆ! ಅಂತಾದೊಡೆ ವರನಂ ಪುಡುಕುವೆಂ, ಬಳಿಯಮೆನ್ನಂದೂರಲಾಗದು ಎಂದು ಆಕೆಯ ಅನುಮತಿಯಿಂ ಪೊರಟಂ ಕೇಳೆನ್ನರಸಿರನ್ನೆ!–ಅತ್ತಮಾ ಕಾಶಿಗೆ ಅನತಿದೂರದೊಳೊರ್ವಂ ಪೊಲೆಯಂ ಸಂಸಾರಮಂ ಪೊರೆಯಲೆಂದು ತನ್ನ ತಡಿಕೆವನೆಯಂ ಬಿಟ್ಟು ಬನದೊಳ್ ಬೇಂಟೆಯಾಡುತ್ತಮಿರ್ದಂ. ಅನ್ನೆಗಂ ಆಪೊಲೆಯಂ ವೇದಾಧ್ಯಯನಂಗೆಯ್ವುತ್ತುಂ, ಶಾಸ್ತ್ರಂಗಳಂ ಪಠಿಸುತ್ತುಂ, ಪುರಾಣಂಗಳಂ ಓದುತ್ತುಂ, ಇರ್ಪ ಮುನಿ ಕದಂಬಮಂ ಕಂಡು ಮುಂಜನ್ಮದ ಪುಣ್ಯಬಲದಿಂ ಈ ಮುನಿ ಕೃತ್ಯಮೇ ಸಂಸಾರಶರಧಿಯಂ ದಾಂಟಿಪ ನಾವೆಯೆಂದುಂ ಮುಕ್ತಿಕಾಂತಾ ಗೃಹಮಂ ತೋರ್ಪ ಮುಂದಾಳೆಂದುಂ ತಿಳಿದು, ಬೇರೆಣಿಕೆಯಂ ಮರೆತು ಆಯೆಡೆಯೊಳೆ ನಿಗಮಾಧ್ಯಯನಾದಿಗಳ ಪಾಠಪ್ರವಚನಂಗಳಂ ಕೇಳುತ್ತಮಿರ್ದಂ. ಅಂತೆ ಕೆಲಗಾಲಂ ಕಳೆಯೆ, ಸಜ್ಜನಸಂಗದಿಂ ತನ್ನೊಳ್ ಬ್ರಹ್ಮಜ್ಞಾನಂ ಮೊಳೆಯೆ, ಬ್ರಾಹ್ಮಣನಾಗಿ ಕಲಾವತಂಸನೆಂಬ ಪೆಸರಾಂತು ಅತಿತೇಜಸ್ವಿಯುಮಾಗಿ, ಆರುಷಿಗಳೊಡನಿರ್ದಂ—

ಅಂತಿರಲ್ ಒಂದು ದಿನಂ ಸುಶರ್ಮಂ ವರಕಾಂಕ್ಷೆಯಿಂ ಆ ಮುನಿಗಳ ಆಶ್ರಮಕೆ ಬರ್ಪುದುಂ. ಆ ಕಿತ್ತಡಿಗಳೊಳ್ ಅಗ್ಗಳನಾದಾ ಕಲಾವತಂಸಂ. ಸುಶರ್ಮಂಗೆ ಆತಿಥ್ಯಮಂ ಗೆಯ್ದು ಕುಶಲಮಂ ಕೇಳ್ದು, ಇತ್ತಲ್ ಆಗಮನಂ ಎತ್ತಣಿಂ ಏಕೆ ಆಯ್ತು? ಎಂದು ಬೆಸಗೊಂಡಂ—

ಸುಶರ್ಮಂ—(ಕಲಾವತಂಸನಂ ಕಂಡು ಎನ್ನ ಕಜ್ಜಕೆ ಫಲಮಾಯ್ತೆಂದೆಣಿಸಿ) ಓ ಭೂದೇವಾಗ್ರಣಿ! ಅತಿ ಕಲಾವತಿಯಾಗಿಯುಂ, ರತಿಸುಂದರಿಯಾಗಿಯುಂ, ಪ್ರಾಪ್ತವಯಸ್ಕೆಯಾಗಿಯುಂ, ಇರ್ಪ, ವೇಣುವೆಸರ ಎನ್ನ ಮಗಳ್ಗೆ ಅನುರೂಪನಪ್ಪ ವರನಂ ಅರಸಲೆಂದು ಊರೆಲ್ಲಂ ಸುತ್ತಿದೊಡುಂ ದಣಿವಲ್ಲದೆ ಇನ್ನೆವರಂ ಆರುಂ ಮನಂಬೊಕ್ಕರಿಲ್ಲಂ. ಅದರಿಂ ಇತ್ತಲ್ ಬರವಾಯ್ತು. ಮುಖಸ್ತುತಿಯೆಂಬೆನಲ್ಲಂ, ನಿನ್ನಂ ನೋಡಿದೊಡನೆಯೆ ಎನ್ನ ದಣಿವೆಲ್ಲಂ ತಣಿದುದು; ಪಲವೇಂ, ನೀನಿನ್ನೆನ್ನೊಳುಂ ಆ ಬಾಲಿಕಾಮಣಿಯೊಳುಂ, ದಯೆಯಿಡುವೆಯಾದೊಡೆ ಈ ವಿಪ್ರಶಿರೋಮಣಿಗಳೊಡನೆ ಅಲ್ಲಿಗೆ ನಡೆತಂದು ಬಿದಿಯಂತೆ ಆ ಕನ್ನೆಯಂ ಕೈವಿಡಿಯಲ್ವೇಳ್ಕುಂ (ಎಂದು ಸವಿನಯಂ ಪೇಳ್ದ ಸುಶರ್ಮಂಗೆ).

ಕಲಾವತಂಸಂ—"ಓವೋ ಅತಿಥಿಗಳಗ್ಗಳ! ಮನೆಯುವಂ ಅತಿಥಿಗಳ ಮನದಿಷ್ಟಮಂ ಪೂರ್ತಿಪುದೊಪ್ಪಿತಂ; ನೀನೆಂದುದು ಅತಿಥಿಯುಪ್ಪ ನೀನೇ ಕನ್ನಿಕೆಯಂ ಕೊಟ್ಟು ಮನೆಯುನನೆನ್ನಂ ಸಂತಸಂಬಡಿಪುದೆಂಬುದಿದೊಂದು ಪೊಸಪರಿಯಲ್ತೆ?"

ಸುಶರ್ಮಂ—ಕಲಾವತಂಸ! ಅಲ್ತು ಪೊಸಪರಿಯಲ್ತು ನೀನೆನ್ನ ಮಾತಂ ಮನ್ನಿಸಿದೊಡೆ ಅತಿಥಿಯ ಮನದಿಷ್ಟಮಂ ಪೂರ್ತಿಸಿದಂತಾಯ್ತು; ಇಲ್ಲದೊಡೆಯೆ ತದ್ವಿರುದ್ಧಮಲ್ತೆ?"

ಕಲಾವತಂಸಂ—"ಸುಶರ್ಮ! ಆಯ್ತು "ವಿಪ್ರವಾಕ್ಯಂ ಜನಾರ್ದನಃ"-ಎಂಬ ನುಡಿಯಂ ಮೀರಲಾರೆಂ" ಎಂದು ಅಲ್ಲಿರ್ಪ ಮುನೀಂದ್ರರೊಡಂಗೂಡಿ, ಸುಶರ್ಮನೊಡನೆ ಆತನ ಮನೆಗೈತಂದು, ಸತ್ಕಾರಮಂ

ಸ್ವೀಕರಿಸಿ, ಆ ಕನ್ಯಕಾಶಿರೋಮಣಿಯಂ ವಿಧ್ಯುಕ್ತಮಾಗಿ ಕೈವಿಡಿದಂ. ಬಳಿಯಂ ಆ ಕಲಾವತಂಸಂ ಆ ಪೆಣ್ಮಣಿಯೊಡನೆ ಪುಟ್ಟಂ ಸಫಲಮಾಗಿಸಿ, ಒರ್ಮೆ ಮುನಿಗಳೊಡನೆ, ಏನೋ ಕಾರ್ಯಾಂತರದಿಂ ಸಂಚಾರಂಗೊಂಡು ಪ್ರಯಾಣವಶದಿಂ ತನ್ನ ಪುಟ್ಟಿನ ಪೊಲೆವನೆಯ ಕಾಡಿಗೆ ಬಂದಂ. ಅಂತಾ ಕಾಡೊಳ್ ಮುನಿಗಳೆಲ್ಲರುಂ ತಂತಮ್ಮ ಕಾರ್ಯಾತುರದಿಂ ಎತ್ತೆತ್ತಮೊ ಪರಿಯೆ, ವಿಧಿವಶದಿಂ ಇವಂ ತನ್ನ ಪೊಲೆವನೆಯ ಅಂಗಳಕೆಯೆ ಇಳಿದಂ–ಅಂತಿಳಿದು ಬಂದವನಂ ಕಂಡಾತನ ಮುಂಬೆಂಡತಿಯಪ್ಪ ಪೊಲೆಯಿತಿ (ಕುರುಪುವಿಡಿದು ಕಣ್ಣೀರ್ತುಂಬಿ ಓಡಿ ವಂದು) "ಓವೋನಲ್ಲ! ಏನೆನ್ನಂ ಕೈಪಿಡಿದ ಪೆಂಡತಿಯಂ ಅನಾಥಳಂ, ಈ ಮರಿಮಕ್ಕಳಂ ದಿಕ್ಕಿಲ್ಲದರಂ, ಈ ನಡ' ಗಾಡೊಳೆ ಬಿಟ್ಟು ಕಲ್ಮನದಿಂ ಕಣ್ಮರ್ಚಿ ಪೋಪುದೆ? ಈ ಕಾಡೊಳ್ ಇನಿಸುಂದಿನಂ ಅಬಲೆಯಾದೊಡುಂ ಕ್ರೂರಮೃಗಂಗಳ ಭಯಮುಂ ಎಂತಾನುಂ ಸೈಸಿ, ಮಕ್ಕಳಂ ಪೊರೆದೆಂ. ಮಕ್ಕಳ ಬಸಿರ್ ಇದೋ ಬೆನ್ನೊಳಿರ್ಕುಂ ನೋಡಗಿಡುವಂ ನೆಟ್ಟಂ ನೀರೆರೆಯದವನಂತೆ ಈ ಮಕ್ಕಳುಮಂ ಕಾಡೊಳೆ ತೊರೆದು ಪೋದ—'ಗಂಡರ ಮನಮೋ ಗುಂಡುಗಲ್ಲೊ? ಎಂಬೊಂದು ನುಡಿಯಂ ಪೊಳೆಯಿಸಿದಯ್. ನೀಂ ಪೋಪಾಗಳ್ ನಾಲ್ದಿಂಗಳ ಬಸಿರಿಯಾಗಿರ್ದೆಂ. ಬಳಿಯಂ ಪಡೆದ ಕೂಸಿದು, ಈಗಳ್ ಮೂರುಂ ಬರಿಸಮಾಯ್ತು. ನೀನೀಗಳ್ ಬರ್ಪಾಗಳ್ (ತೊದಲ್ನುಡಿಯೊಳ್) 'ಅಬ್ಬೆ! ಎನ್ನಪ್ಪಂ ಆರ್?' ಎಂದೆನ್ನೊಳ್ ಈ ಸಿಸು ಒತ್ತಂಬದ ಪರಸನಂ ಗೈವುತಿರ್ದುದು. ಓ ಮಗು! ಇದೋ ನಿನ್ನ ಪ್ರಶ್ನಕೆ ಉತ್ತರಂ, (ಎಂದಾಸಿಸುವಂ ಆತನ ಚರಣದೆಡೆಯೊಳ್ ಇಟ್ಟು ಕಣ್ಣೀರ್ವಿಡುತಿರ್ದಳ್).

ಕಲಾವತಂಸಂ–"ಆಃ! ಇದೇಂ ಆಕಸ್ಮಿಕದ ಒಂದು ಪ್ಪೊಮಾಲೆ?" "ಎಂದು ಇನಿಸುಂಯೋಚಿಸಿ ಅರಿಕೆಯಾಗೆ ಸಿಡಿಲ್ ಪೊಡೆದ ಮರದಂತೆ ಮೈಮರೆತು ಅಂತೆ ಎಳ್ಚತ್ತು ಕುಡಿವರಿವ ಚಿಂತೆಯಂ ಎಂತಾನುಂ ಸೈಸಿ, ತಾಂ ಪೊರಟು ಅನ್ನೆವರಂ ಪೊರ್ದಿದ ಅವಸ್ಥೆಗಳಂ ಪೇಳ್ದಂ".

ಚಂಡಾಳಿ—"ಎನ್ನೆರೆಯ! ಅಂತಾದೊಡೆ ಒಳ್ಳಿತಾಯ್ತು. ನೀನೀ

ಗಳ್ ದೊಡ್ಡಿದನಾಗಿ ಇರ್ಪೆಯಲ್ತೆ? ಅದರಿಂ ಆ ಪೆಂಡತಿಯಪ್ಪ ಎನ್ನ ತಂಗೆಯುನುಂ, ಪಲವುಂ ಪಣಂಗಳನುಂ, ಅಲ್ಲಿಂದಿಲ್ಲಿಗೆ ತರಿಸಿ ಸೊಗದಿಂ ಇರಲಕ್ಕುಮಲ್ತೆ?"

ಕಲಾವತಂಸಂ—"ಕಾಂತೆ! ಆಂ ಪೂರ್ವಾಸ್ಥೆಯನಿದಂ ಪೊಂದಿದೊಡೆ ಪಣಮಿರ್ಕೆ, ಒಂದು ತೃಣಮುಮಂ ಈಯರ್; ವೇಣೇಂ ವಿಪ್ರರ ಪೆಣ್ಣೊರ್ವಳ್ಗೆ ಅಧೋಗತಿಯುನೊದವಿಸಿದನೆಂದು ಮುನಿಗಳೆಲ್ಲರುಂ ಕೂಡಿ ಸಾಪಮಂ ಈವುದು ನಿಜಂ."

ಪೊಲೆಯಿತಿ—"ನಲ್ಲ! ಅದೆಂತಾನುಂ ಇರ್ಕೆ-ನೀನಿರ್ದೊಡೆ ಎನ್ನ ಐಸಿರಿ ಎಂಟುಮುಂಟು. ಅದುಂ ಪೋಕೆ ನೀನಗಲ್ದ ಸಜ್ಜೆಗೋಣೆಗೆ ಇನಿಸುಮಲಂಕಾರಮಿಲ್ಲಂ. ಅದರಿಂ ನಿನ್ನನೆ ಇದಿರ್ನೋಡುತಿರ್ಪುದು" (ಎಂದು ಮರುಗಿಯುಂ, ಬೆಡಂಗಿಂ ಮರುಳ್ಮಾಡಿಯುಂ, ಎಂತಾನುಂ ತನ್ನ ತಡಿಕೆವನೆಗೆ ಎಳದುಯ್ದಳ್). "ಪಿರಿದೇಂ, ಆರ್ಗುಂ ಸಂಸಾರಪಾಶಂ ಪಿರಿದಲ್ಲವೆ?"

ಕಲಾವತಂಸಂ—ತನ್ನೊಳೆ ತಾಂ "ಹಾ ಏಂ ಮಾಳ್ಪೆಂ! ಕೈವಿಡಿದಳನಿವಳುಮಂ, ಈ ಮಕ್ಕಳುಮಂ, ತೊರೆವುದೆಂದೊಡೆ ಸ್ವಾಮಿಯುಂ ಭೂಮಿಯುಂ ಮೆಚ್ಚದ ಕೆಲಸಂ. ಅತಿ ನಿಪುಣೆಯುಂ, ತ್ರಿಲೋಕಸುಂದರಿಯುಂ, ತ್ರಿಕರಣಪೂರ್ವಕಂ ಎನ್ನನೆ ನಂಬಿದ ವೇಣುವಂ ಮರೆತೊಡೆ ಇಹಪರವಿಹೀನನಪ್ಪುದೇ ಗತಿ. ಹುಂ, 'ತಲೆಯೊಳ್ ಬರೆದುದು ಎಲೆಯೊಳ್ ಪೊಸೆ ಮಾಸುವುದೆ?' ಎಂಬ ನಾಣ್ಣುಡಿಯಂತೆ ಬಂದುದಂ ಅನುಭವಿಸುವೆಂ" (ಎಂದವಳೊಡನೆ ಪಲವುಂ ಕಾಲಮಲ್ಲಿರ್ದಂ).

ಅಂತಿರಲ್ ಬ್ರಹ್ಮತೇಜಂಗಳೆಲ್ಲವುಂ, ಕೃಷ್ಣಪಯೋಧರಂ ಆವರ್ದಕಾರ್ಗಾಲದ ದೆವಸಂಗಳಂತೆ ಮಾಸಿದುವು. ಮೊಗವೋ, ಚಂಡಾಳಿ ಪೀರ್ದ ಬೆಳ್ದಾವರೆಯಂತೆ ವಿರಸಮಾಯ್ತು. ಬಳಿಯಂ ಪಲವುಂ ಪಗಲುಂ ಕಳೆಯೆ ಆ ಪೊಲೆಯುಂ ತನ್ನ ಅವಸ್ಥೆಯುಂ ತಿಳಿಯದೆ ಸೊಡರಂ ಪಣ್ಣೆಂದು ಬಗೆವ

ಪತಂಗದಂತೆ ವೇಣುವನೆ ನೆನೆದು, ಮನೆಯೊಳ ಕಣ್ಮರೆ
ಮನೆಗೆ ಬಂದನೆ ಬಂದಂ. ಅಂತು ಬಂದು ಮೆಟ್ಟನೇರ್ದು ಜಗಲಿಗೆ ಅಡಿಯಿಡುವುದುಂ.

ಸುಶರ್ಮಂ—(ಉರಿದೇಳ್ದು) "ಚಿಃ ಪೊಲೆಯ, ನೀನಾರ್? ಏಕೈತಂದೆ? ಇದೇಂ ಬೊಮ್ಮಣರ ಮನೆಯೆಂಬುದಂ ಅರಿಯೆಯ? ತೊಲ ತೊಲಗು. ಅಂತುಂ ಏನಾನುಂ ಕಜ್ಜಮಿರ್ದೊಡೆ ದೂರಮಿರ್ದು ಗಳಪಿ ಪೋಗು" ಎಂದು ದಟ್ಟಿಸಿದಂ.

ಚಂಡಾಲಂ–(ಆ ನುಡಿಗೇಳ್ದು ಬೆದರ್ದು ಅಚ್ಚರಿವಟ್ಟು) "ಮಾವ! ಏನಾಂ ಕಲಾವತಂಸನಲ್ಲವೆ? ಇನಿತರೊಳುಂ ಮರವೆಯೆ? ಬಿಸಿಲ್ಗೆ ಅತಿದೂರಂ ನಡೆದು ಮೈ ಇನಿಸುಂ ಕರಿದಾಯ್ತೆಂದು ಇಂತೆಲ್ಲಂ ಪೊಲ್ಲದುದಂ ನುಡಿವುದೆ? 'ಕರ್ಬು ಡೊಂಕಾದೊಡೆ ಸೀಯುಂ ಡೊಂಕೆ?' ಎಂಬ ನಾಣ್ಣುಡಿಯುನರಿಯೆಯ ? ಪಿಂದೆ ಹಿಮಕರುಕುಲಶೇಖರನಪ್ಪ ನಳಭೂಪನ ಮೈಯುಂ ಇಂತೆಯೆ ಕರಿದಾದೊಡುಂ ಬಳಿಯಮೇಂ ಕೀಳಾದನೆ?"

ಸುಶರ್ಮಂ—(ಆ ಮಾತಂ ಕೇಳ್ದು ಸಂದೆಗದಿಂ ಭಯಕೋಪಂಗಳೆರಡುಂ ಒಟ್ಟಿಗೆ ಆಂ ತಾನೆನೆ ಮಗಳಂ ಕರೆದು) "ಎಲೆ ಮಗಳೆ, ಇವಂ ಆವೊಂ? ಏಂ ನಿನ್ನೆರೆಯಂ?" ಎಂದು ಕೇಳ್ದಂ.

ವೇಣು—(ದಿಟ್ಟಿಸಿ ಮರುಕದಿಂ). "ಅಪ್ಪ, ಅಪ್ಪುದು; ಆದೊಡೆ ಇವನಂ ಪರೀಕ್ಷಿಸಿದೊಡೆ ನಿಕ್ಕುವಂ ಈಗಳ್ ಪೊಲೆಯನಾಗಿರ್ಪಂ."

ಚಂಡಾಲಂ—"ಓ ಎನ್ನ ಕಾಂತಾಶಿಖಾಮಣಿ! ಏಂ ನೀನುಮಿಂತೆಲ್ಲಂ ಎನ್ನೊಳ್ ಅಪವಾದಾರೋಪಣಂ ಗೆಯ್ದಪುದೆ?" (ಎಂದು ಮೆಲ್ಲನೆ ಆಕೆಯ ಸಮೀಪಕೆ ಅಡಿಯಿಡಲ್ !)

(ಆ ಕಾಂತೆ ತೊಟ್ಟನೆ ತೊಲಗಿದೂರಮಿರ್ದು, ಅಪ್ಪಂಗೆ ಒರೆದು, ಭಟರಂ ಕರೆಯಿಸಿ, ಆತನ ಕಾಪಿಗೆ ಸಮನಿಸಿ) "ನಿನ್ನ ಪರಿ ಏತರಿಂ ಈತೆರನಾಯ್ತು? ಪೇಳ್, ಅಲ್ಲದೊಡೆ ನಿನ್ನ ಜೀವಿತಕೆಯೆ ಕಡೆಯಾ

ಯ್ತು ಎಂದು ಬೆದರ್ಚಿ ಕೇಳ್ದಳ್. ಆ ನುಡಿಗೇಳ್ದು ಆ ಪೊಲೆಯಂ ತನ್ನಂದಮನೆಲ್ಲಂ ಬಿರ್ಚಿದಂ.

ಬಳಿಯಂ ಆ ಕಾಂತಾಮಣಿ ಇನ್ನೀ ಮಲಿನಮಾದ ಪಾಳೊಡಲಂ ಉರಿಯೊಳ್ ಪುಗಿಸಿ ಪರಿಶುದ್ಧಮಾಗಿ, ಸುವಂಶದೊಳ್ ಪುಟ್ಟಿ, ಪರಮಾತ್ಮನ ಕೈಯನೆ ಪೊರ್ದುವೆನೆಂದು ನಿರ್ಣಯಿಸಿ, ಅಂತೆ ತನ್ನ ಮೆಯ್ಯಂ ಕಿರ್ಚಿಗೆ ಸಮರ್ಪಿಸಿದಳ್. ಆ ಪೊಲೆಯನುಂ ವೇಣುವಂ ತೊರೆದ ಈ ಜೀವನಮೇಕೆ? ಎಂತಾನುಂ ಆಕೆಯನೆ ಪೊರ್ದುವೆನೆಂದು ಆ ಉರಿಯೊಳ್ ಅಸುಂಗಳೆದಂ.

ಬಳಿಯಂ ಪಲವುಂ ಪಗಲುಂ ಕಳೆಯೆ, ಆ ಮಸಣದೊಳ್ ವಂಶಮೊಂದುದಿಸಿತು.

ಭಾರತಿ— (ಅಚ್ಚರಿಯಿಂ). "ಕಾಂತ, ಸ್ಮಶಾನದೊಳ್ ವಂಶಂ ಪುಟ್ಟುವುದೆಂತೊ? 'ರವಿ ಕಾಣದುದಂ ಕವಿ ಕಾಣ್ಬಂ' ಎಂಬರ್. ನಿನ್ನ ನುಡಿಯಂ ಕೇಳ್ದೊಡೆ, ರವಿ ಪುಸಿಯುಂ ಕಾಣಂ, ಕವಿ ಪುಸಿಯನುಂ ಕಾಣ್ಬಂ ಎಂದೇ ಆ ನುಡಿಯ ಅರ್ಥಂ ಎಂದೆಣಿಪ್ಪೆಂ."

ಕಬ್ಬಿಗಂ—(ಕಿವುಡಂಗೆ ಡವುಡೆಯೆ?) "ಎಂಬ ನುಡಿ ನಿನ್ನೊಳೆ ಪೋಲ್ದುದು. ಅಲ್ಲದೊಡೆ ವಂಶಶಬ್ದಾರ್ಥಮನೆ ತಿಳಿಯದೆ ಇಂತೆಲ್ಲಂ ಅಸಂಬದ್ಧಾರ್ಥಮಂ ಗಳಪುವೆಯ?"

ಭಾರತಿ— "ನಲ್ಲ, ಅರಿಯದೆ ಪೇಳ್ದೆಂ. ಏಂ ವಂಶಮೆಂದೊಡೆ ಸಂತಾನಮಲ್ತುಮೆ?"

ಕಬ್ಬಿಗಂ—(ನಕ್ಕು). "ನಿಮ್ಮ ಪೆಣ್ಗಳ ಜಾತಿಗೆ ಏನೊರೆದೊಡಂ ಒಂದು ಸಂತಾನದ ಯೋಚನೆ. ಅಧಿರ್ಕೆ ಮುನ್ನೊರ್ವಳ್ ರಾಮಾಯಣಮಂ ಕೇಳ್ದು ಕಡೆಗೆ ರಾಮಂಗಂ ಸೀತೆಗಂ ಬಾಂಧವ್ಯಮುಂಟೆ? ಎಂದು ಕೇಳ್ದಳಂತೆ. ಇಂತಿರ್ಪರ್ಗೆ 'ಅಜೀರ್ಣೇ ಭೋಜನಂ ವಿಷಂ'— ಎಂಬಂತೆವೊಲ್ ಕಥೆಯೋ ವ್ಯಥೆಯಲ್ತೆ?"

ಭಾರತಿ— ಅರಿಯದೆ ಕೇಳ್ದ ಶಬ್ದಾರ್ಥಂ ಇಂತೆಲ್ಲಂ ಬಿತ್ತರದ ಪುರಾಣಮೆ? ಸಾಲ್ಗುಂ—ಪೇಳ್.

ಕಬ್ಬಿಗಂ—"ಅರಿಯದೊಡೆ ಮೊದಲೇ ಕೇಳಲ್ ಏಂ ಮಾನಂ ಪಿರಿದಾಯ್ತೆ? ಹುಂ, ಕೇಳ್ದೊಡೆ ದೂರುವುದೆಂತು? ಇರ್ಕೆ ಒರ್ಮೆಗೆ ಸೈಸಿದೆಂ ವಂಶಮೆನೆ ಬಿದಿರೆಂಬ ಅರ್ಥಂ."

ಭಾರತಿ— "ಎನ್ನರಸ, ತಿಳಿಯದೆ ಪೇಳ್ದುದರ್ಕೆ ಕೋಪಿಸದಿರ್ ಕಾಲ್ಗೆ ಎರಗುವೆಂ."

ಕಬ್ಬಿಗರಾಳ್ದಂ— (ಕೋಪಮಂ ನಟಿಸಿ). ಹುಂ, ತುಳಿದುಂ ಕಾಲ್ವಿಡಿವ ಒಂದಾಟಮಿದು ಎಂದು (ಬಳಿಯಮುಸಿಕನಿರ್ದಂ).

ಭಾರತಿ— "ಎಲೆ ನಲ್ಲ, ಇನ್ನುಂ ಮುನಿಸಿಟ್ಟೊಡೆ ಎನ್ನ ಎಕ್ಕೆ ಸರದ ಆಣೆ. ಮೇಣೇಂ ಪಟ್ಟೆಗುಪ್ಪಸದ ಆಣೆ."

ಕಬ್ಬಿಗಂ— (ನಕ್ಕು). "ಕಾಂತೆ, ಇನ್ನದರೊಳಗಣ ಆಣೆಯುಮುಂಟೆ?"

ಭಾರತಿ— (ನಗೆಮುನಿಸಿಂ). "ಉಃ! ನಾಣಿಲ್ಲದ ನುಡಿಯೆ! ಇರ್ಕೆ, 'ಸಂಕಲ್ಪದೊಳೆ ಪುಣ್ಯಕಾಲಂ ಕಳೆದುದು;' ಇನ್ನಾನುಂ ಕತೆಯಂ ಪೇಳ್."

ಕಬ್ಬಿಗಂ—"ನಲ್ಲೆ, ಪೇಳ್ವೆಂ. ಆದೊಡೆ ನೀನುಮಿಂತೆಲ್ಲಂ ಅಸಂಬದ್ಧಾರ್ಥಂಗೊಂಡು ಬಾಯ್ಗೆವಂದಂತೆ ನುಡಿದೊಡೆ ನಿನಗುಂ ಎನ್ನ ನೇವಳದಾಣೆ, ಮತ್ತೀಂ ಎನ್ನ ಮುಂಡಾಸಿನಾಣೆ."

ಭಾರತಿ—"ಕಾಂತ, ಏನಾಣೆಯು ಸಾಲಂ ತೀರ್ದುದಲ್ತೆ? ಇನ್ನಾನುಂ ಕತೆಯಂ ಪೇಳ್.?

ಕಬ್ಬಿಗಂ—"ಸವಿನುಡಿವೆಣ್ಣೆ, ಬಳಿಯಮಾ ಶ್ರೀಕೃಷ್ಣಂ ಗೋವ್ಗಳಂ ಪೊರೆವುತ್ತಂ—

ಭಾರತಿ — "ಉಃ! ಇದೇತರ ಕತೆಯೊ? ಏನಾವುಸಣದೊಳ್ ಪುಟ್ಟಿದ ಬಿದಿರ ಕುಡಿ ಮುರುಂಟಿತೆ?"

ಕಬ್ಬಿಗಂ — "ಓ ಕಾಂತೆ! ಮರೆತೆಂ. ನೀನಿಂತೆಡೆಯೆಡೆಯೊಳೊಂದೊಂದಂ ಕೇಳ್ದೊಡೆ, ಅದಂ ಬಿತ್ತರಿಪಾಗಳೆ ಬೊಮ್ಮನ ಆಯುಸ್ಸಿಗೆ ಮಂಗಳಮಕ್ಕುಂ. ಅಂತಿರಲ್ ಎಂತು ನೆನೆಂಬರಿಕೆ ಇರ್ಕುಂ."

ಭಾರತಿ— (ನಕ್ಕು). ಎಂತಾದೊಡುಂ ನೀನೇ ಮೇಲ್. ಇನ್ನಾನುಂ ಪೇಳ್ ಪೇಳ್.

ಕಬ್ಬಿಗಂ — (ನಸುನಕ್ಕು). "ಮೇಲೋ ಕೀಳೋ, ಎಂತಾನುಮಿರ್ಕೆ ಪರಿಹಾಸ್ಯಂ ಸಾಲ್ಗುಂ. ಬಳಿಯಂ, ಆ ಬಿದಿರ ಮೊಳೆ ಬೆಳೆಯೆ, ಕೆಲಗಾಲಂ ಕಳೆಯೆ,ಒಂದಿನಂ ವಾಸುದೇವಂ ಶ್ರೀಕೃಷ್ಣಂ ಆ ಯೆಡೆಯೊಳೆ, ಗೋವಳರೊಡನೆ ಬರ್ಪುದುಂ, ಆ ಪಸುರ್ವಿದಿರಂ ಕಂಡಾ ಪರಮಾತ್ಮಂ, 'ಓವೋ! ಇದೇ ನೆಮ್ಮ ವೇಣೂದಯಮೆ? ಇಂದಾಂ ಸಂತುಷ್ಟನಾದೆಂ, ನಂಬಿದರ ಮನೆ ದಿಷ್ಟಮಂ ಕೈಗೂಡಿಪುದೆಂದೊಡೆ, ಎಮ್ಮ ಕಜ್ಜದ ಕಳಸಮಲ್ತೆ?' ಎಂದು ಮಿತ್ರರೊಡನೆ ಆಮೂಲಮನೊರೆದು, ಅದರಿಂದೊಂದು ಭಾಗಮಂ ಕಡಿದು, ಆ ಪೊಲೆಯನಂ ಪೊಂದಿದ ದುರಿತಂ, ಏಳುಂ ಜನ್ಮಕುಂ ಮೊಳೆದೋರಲಾಗದೆಂಬಂತೆವೊಲ್ 'ಸರಿಗಮಪದನಿ' ಎಂಬ ಸಪ್ತಸ್ವರಂಗಳ್ಗೆ ಅನಿತುಮೊಟ್ಟೆಯಂ ಗೈದು ವೇಣುವಾದ್ಯಮೆಂದೇ ಪೆಸರಿಟ್ಟು ಬಾಜಿಸಿದಂ. ಆ ಪೊಲೆಯುನೆ ಅದರೆಡೆಯ ಗಂಟು. ವಾದ್ಯಮಂ ಗೈವಾಗಳ್ ಅದು ಕಡಿದು ತೆಗೆಯೆಪಡುಗುಂ. ಎಲೆ ಕಾಂತಾಮಣಿ! ಭಗವಂತಂ ಶರಣರಕ್ಷಣಕೆಂದು ಆ ವೇಣುವಂ ಧರಿಸಿದ ಬಿಸಯಂ ಅರಿಕೆಯಾಯ್ತೆ?"

ಭಾರತಿ — "ಕಾಂತ! ಆಯ್ತು ಅರಿಕೆಯಾಯ್ತು, ಮುಂಗತೆಯೇಂ?"

ಕಬ್ಬಿಗಂ — ಬಳಿಯಮಾ ಶ್ರೀಕೃಷ್ಣಂ ವೇಣುವಂ ಬಾಜಿಸುತ್ತುಂ, ಕೆಳೆಯರೊಡನೆ ಬಿನದಿಸುತ್ತುಂ, ಇರ್ಪಾಗಳ್ ಒಂದು ಪಳೆಯ ಪಸುವಂ ಬೆಂಬಿಡದೆ ಪೋಪ ಬತ್ತುಂಗರುವಂ ನೋಡಿ.

ಮಣಿವರ್ಮನೆಂಬವಂ—"ಎಲೆ ಕೃಷ್ಣ, ಇದೋ. ಈ ಮೊಲೆ ಮರೆದ ಸೊರ್ಕುಂ ಬೋರಿ ನಿನ್ನಂ ನೆನೆಯಿಕುಂ."

ಕೃಷ್ಣಂ— "ಮಣಿವರ್ಮ, ಅದೆಂತು?"

ಮಣಿವರ್ಮಂ—"ಕೃಷ್ಣ, 'ಅನುಭವರಸಿಕೊ ವಿಜಾನಾತಿ' ಎಂಬ ನುಡಿಯಂತೆವೊಲ್ ಆನೆಂದ ಮಾತಿನ ಗುಟ್ಟಂ ನೀನಲ್ಲದೆ ತಿಳಿವ ನಾವಂ?"

ಕೃಷ್ಣಂ— "ನಿನ್ನ ಮಾತಿನ ಅರ್ಥಂ ಆಕಾಶಪುಷ್ಪಮೆ; ಅದರಿಂ ಬರಿದೆ ಅನರ್ಥವಚನಂಗಳಂ ಎತ್ತದಿರ್."

ಮಣಿವರ್ಮಂ— "ಕೃಷ್ಣ! ಅನರ್ಥವಚನಂಗಳನೆತ್ತುವುದಾನೋ ಎನ್ನ ನುಡಿಯ ಅರ್ಥಮನರಿಯದ ನೀನೋ?"

ಕೃಷ್ಣಂ—"ಅಂತಾದೊಡೆ ಅದಂ ಬಿತ್ತರಿಸಿ ಪೇಳ್. ಬರಿದೆ ಈ ಕರುವನೆನ್ನೊಳ್ ಪೋಲಿಸಿದೊಡೇನರ್ಥಂ?"

ಮಣಿವರ್ಮಂ—ಅರ್ಥಮೆ? ಬೇರೇನುಮಿಲ್ಲಂ; ನಿನಗೆ ಆವ ಬಿಸಯದೊಳುಂ ಅನುರೂಪಳಲ್ಲದ ರಾಧೆಯುನೆ ನೀನೇಗಳುಂ ಬೆಂಬಿಡೆಯೆಂಬುದೇ."

ಕೃಷ್ಣಂ—"ಇದೇಂ! ರಾಧೆ ಎನಗೆ ಅನುರೂಪಳಲ್ಲವೆ? ಅದೆಂತಾನುಮಿರ್ಕೆ, ನಿನ್ನ ನುಡಿಯುಂ ಕೇಳ್ದೊಡೆ ರಾಧೆಯಿನುಂ ಚೆಲ್ವೆಯಾಗಿಯುಂ ಎನಗನುರೂಪಳಾಗಿಯುಮೊರ್ವಳಿರ್ಪಳ್ ಎಂದಾಯ್ತುತ್ತೆ."

ಮಣಿವರ್ಮಂ—"ಅದೇಂ ಪೊಸತೆ?"

ಕೃಷ್ಣಂ—"ಕೆಳೆಯ, ಅಂತಾದೊಡೆ ಅವಳಾರ್? ಪೇಳ್ ಕೃಷ್ಣನ ಒಂದು ಸಾಷ್ಟಾಂಗ ಪ್ರಣಾಮಂ."

ಗುಣವರ್ಮನೆಂಬವ—"ಕಿಟ್ಟ, ಏನವಳೊಳುಂ ಕಣ್ಣೆ? ಅದು ಸಾಗದು ಕಣಾ."

ಕೃಷ್ಣಂ—"ಆ ಬಿಸಯಂ ನಿನಗೇಕೆ? 'ಪೋದೊಡೆ ಕಲ್ಲು ಬಂದೊಡೆ ಪಣ್ಣು' ಎಂಬಂತೆವೊಲ್ ಪ್ರಯತ್ನಂಗೆಯ್ವೆಂ ಪೇಳ್."

ಗುಣಂ—"ಅದಂ ಪೇಳೆಂ. ಪೇಳ್ದೊಡೆ ನಿನ್ನ ತಾಯ್ತಂದೆವಿರ್ ಗುಣವರ್ಮನುಂ ಎನ್ನಮಗಂಗೆ ದುರ್ಬುದ್ಧಿಯಂ ಕಲಿಸಿದನೆಂದೆನ್ನನುಂ ಬೈವರ್."

ಕೃಷ್ಣಂ—"ಓವೋ ನೀಂ ಮಾಪುನೀತಂ ಅಪವಾದಕೆ ಬೆದರ್ವ ವಂ. ನಿನ್ನ ನವೀನ ಸೌಜನಮೆಲ್ಲಮಿರ್ಕೆ; ಪೇಳ್ವೊಡೆ ಪೇಳ್; ಅಂತುಂ ಪೇಳದೊಡೆ ಪಡಿಯೊಂದು ಮನೆಯನುಂ ಪೊಕ್ಕು ಆ ಬೆಡಂಗುಗಾರ್ತಿಯಂ ನೋಡಿ ಮನಂಬಂದಂತೆ ಗೈಯದಿರೆಂ" (ಎಂದರೆಚಣಮಿರ್ದು ಕೋಪಂ ಮುಡಿಯೆ,) "ಎಲೆ ಗುಣವರ್ಮ! ಪೇಳಯ್; ಫಲಮಿಲ್ಲದೆ ಬರಿದೆ ಪೇಳಲ್ವೇಳ್ಕುಮೆ ಎಂದೆಣಿಸದಿರ್. ಆ ಮುದುಕಿ ಕಾಳಿಂದಿಯ ಮನೆ ಯಿಂ ಕಳ್ವ ಬೆಣ್ಣೆಯೊಳಂ ಮೊಸರೊಳಂ ಮಜ್ಜಿಗೆಯೊಳಂ ಅರ್ಧಂ ಮೇಣೇಂ ಉಣಲ್ ಮುತ್ತಿನಂತಿರ್ಪ ತಂಗುಳಂ ಇಡಿಮಾಂಗಾಯುಮಂ ನಿನಗೀವೆಂ."

ಗುಣಂ—ಏನಾಂ ಲಂಚಂಗುಳಿಯೆಂದೆಣಿಸಿರ್ಪೆಯ? ಪೋ ಬೆಣ್ಣೆಯ ಮಾತುಗಳ್ಗೆ ಮರುಳಪ್ಪನಲ್ಲಂ. ನೀನೆಂತಾನುಂ ಪುಡುಕಿ ಆ ಮದಿರಾಕ್ಷಿ ಯಂ ಮನಂಬಂದಂತೆ ಗೈವನಲ್ಲವೆ? ಅಂತಿರೆ ನಿನಗೆನ್ನ ತೋಟಿಯೇಕೆ?"

ಕೃಷ್ಣಂ—(ಗುಣವರ್ಮನ ಕೈವಿಡಿದು) "ನಿನ್ನಂ ಕೆಳೆಯರೊಳಗ್ಗಳ ನೆಂದೆಣಿಸಿ ಬಿನದಕೆ ಅಂತೆಲ್ಲಂ ಮಾತಾಡಿದೆಂ, ಅದರ್ಕಂ ಕೋಪಮೆ? ಸಾಲ್ಗುಂ, ಸಾಲ್ಗುಂ, ಇನ್ನಾದೊಡಂ ಆ ಪೆಣ್ಮಣಿಯದಾರೆಂಬುದನುಸಿ ರಯ್, ನೀಂ ಹಾಯ್ಕಿದ ಕಟ್ಟಿಯನಾದೊಡಂ ಮೀರಿ ನಡೆಯೆಂ."

ಗುಣಂ—"ಆಯ್ತು ಪೇಳ್ವೆಂ, ಕಡೆಗೆ ನಿನ್ನಬ್ಬೆಯೊ ಅಪ್ಪನೊ ಬೈದೊಡೆ ಆನೇನುಮಂ ಅರಿಯೆನೆಂಬೆಂ."

ಕೃಷ್ಣಂ—"ತಾಯ್ತಂದೆವಿರ ಬಿಸಯಮೊ? ಅದೆಂತಾನುಮಿರ್ಕೆ ಆ ಮುದುಕರಂ ಬೋಧಿಸಿ ಒಪ್ಪಿಪುದೇಂ ದೊಡ್ಡಿತೆ?"

ಗುಣಂ—"ಎನಗೇಂ? ಪೇಳ್ವೆಂ ಕೇಳಾದೊಡೆ, ನಿನ್ನ ರಾಧೆಗೆ ಚಂದ್ರಾವಳಿಯೆಂಬಳೊರ್ವಳ್ ತಂಗೆ ಇರ್ಪಳ್. ಆಕೆಗೆ ಪರಯಂ ಪದಿನಾರೊ? ಪದಿನೇಳೊ? ಪೆರ್ಚೇಂ? ಚೆಲ್ವಿಕೆಯಂ ಚಾಣ್ಮೆಗಳಂ ಅಂಗ ಭಂಗಿಗಳಂ ಬಣ್ಣಿಸಲ್ ಆ ಸೇಸಂಗುವಸಾಧ್ಯಂ. ಬೊಮ್ಮನ ಕೈತಿರ್ದಿಕೆಯ ಸಚೇತನವಾದೊಂದು ಬೊಂಬೆಯಂತಿರ್ಪಳ್."

ಕೃಷ್ಣಂ—"ಏಂ ರಾಧೆಯ ತಂಗೆಯೆ? ಅಂತಾದೊಡೆ ಸಮೀಪದವಳಾಯ್ತು, ಆ ಬಿಸಯಂ ದೊಡ್ಡಿತಲ್ಲಂ." (ಎಂದಿನಿಸುಂ ಯೋಚಿಸಿ) ಅಂತಾದೊಡೆ ರಾಧೆ ಏಕೊರೆದಳಿಲ್ಲಂ?"

ಗುಣಂ—"ಏಂ ನೀನಿನಿತುಂ ಮತಿವಿಕಳನೆ? ಉಸಿರ್ದೊಡೆ ನೀನವಳೊಳ್ ಕಣ್ಣಿಟ್ಟೊಡೆ, ಬಳಿಯಂ ಮುದುಕಿಗೆ ಎನಗೆ ಆವ ಗತಿಯೆಂದು"

ಕೃಷ್ಣಂ—"ಎನ್ನ ರಾಧೆಯನಿತುಂ ಮುದುಕಿಯೆ?"

ಗುಣಂ—(ನಕ್ಕು) "ಅಲ್ತಲ್ತು, ಮುದುಕಿಯಲ್ತು 'ಮೆಚ್ಚಿದಂಗೆ ಮಸಣಮುಂ ಸೊಗಂ' ಎಂಬ ನಾಣ್ಣುಡಿಯಂತೆ ನಿನ್ನ ಕಣ್ಗೆ ಪದಿನೆಂಟುಂ ಬರಿಸದ ರತಿಸುಂದರಿಯೆ ನಿಜಂ."

ಕೃಷ್ಣಂ—"ಪರಿಹಾಸ್ಯಮೆಲ್ಲಮಿರ್ಕೆ; ಆ ಚಂದ್ರಾವಳಿ ಎಲ್ಲಿರ್ಪಳ್?"

ಗುಣಂ—"ಅದೀಗಳ್ ಅತಿಗಹನಂ. ನಿನ್ನ ಭಯದಿಂ ಆಕೆಯ ಗಂಡಂ ಚಂದನೆಂಬವಂ ಸಕುಟುಂಬಮಾಗಿ ತಾನಿಲ್ಲಿಗೆ ದೂರಮಿರ್ಪ ಸಿಂಧು ಗ್ರಾಮದೊಳ್ ಮನೆಗೈದಿರ್ಪಂ. ಬರಿಸಕೆ ಒರ್ಮೆಯಾದೊಡುಂ ಅಬ್ಬೆಯ ಮನೆಗೆ ಬಂದೊಡೆ, ಒಂದೇ ದಿನಂ, ತಪ್ಪಿದೊಡೆ ಎರಳ್ದಿವಸಂ ಮನೆಯೊಳಯಿಂಕೆಯೆ ಇರಲ್ವೇಳ್ಕುಮೆಂದಾ ಚಂದ್ರಾವಳಿಗೆ ಚಂದನ ಆಜ್ಞೆಯಂತೆ."

ಕೃಷ್ಣಂ—"ಆದೊಡೆ ಏನೀಗಳ್ ಬಂದ ವರ್ತಮಾನಮುಂಟೆ? ಮತ್ತೇನುಂ ಉಪಾಯಮಿಲ್ಲದೊಡೆ ಒರ್ಮೆ ಕಣ್ಣಪಾಪಮನಾದೊಡುಂ ಕಳೆವುದು."

ಗುಣಾಂ—"ನೆನ್ನೆ ಬಂದಿರ್ಪಳಂತೆ. ಆದೊಡೆ ಪೊರಡಲುಂ ಆಯ್ತು. ಅಂತಿರ್ದೊಡುಂ ಒಳಗೆಯೆ ಇರ್ಪಳ್. ಏಂ ಗೈವುದು?

ಕೃಷ್ಣಂ—"ಒಳಗೆಯೆ ಇರ್ದೊಡೇಂ? ವ್ಯೈಮರೆಯಿಸಿ ಪೋಗಿ ಕೊಳಲಂ ಬಾಜಿಸಿದೊಡೆ, ಕೇಳಲ್ ನವಯೌವನೆಯಾಕೆಯಿರ್ಕೆ, ಜೋಲ್ದುದುಕಿ ಅವಳಜ್ಜಿಯುಂ ಪೆರಗೆ ನಿಲುಕುವಳ್, ಆ ಬಿಸಯಮಂತೆ ಪೋಕೆ ಬಂದಿರ್ಪುದು ನಿಜಮಲ್ತೆ?"

ಮುಣಾರಿ — "ನಿಕ್ಕುವಂ ಬಂದಿರ್ಪಳ್ ಆಂ ನೆನ್ನೆ ತಿಂಗಳ್ಬೆಳಕಿನೊಳ್ ವಿನೋದದಿಂ ತಿರುಂಗುತ್ತಂ ಆಕೆಯ ತವರ್ಮನೆಯ ಬಳಿಯೊಳೆ ಪೋದೆಂ. ಆಗಳ್ ಆ ಮನೆಯ ಒಳಂಗಡೆಯಿಂ ಏನೇನೋ 'ಕುಸು ಕುಸು' ಕೇಳ್ದುದು. ಇದೇನೆಂದು ಕಿವಿಗೊಟ್ಟು ಕೇಳೆ, ಆ ಚಂದ್ರಾವಳಿಯೊಳೆ ಅವಳಬ್ಬೆ ಏನೋ ನಾಣ್ನುಡಿಗಳನೊರೆವುತುಂ ಕೇಳುತುಮಿರ್ದಳ್. ಎಡೆ ಎಡೆಯೊಳ್ ಮೆಲ್ಲನೆ ಮಾತಾಡೆನ್ನ ಮಗಳೆ! 'ಆ ಕೃಷ್ಣಂ ಈ ಸಮಯದೊಳ್ ಪೆರಗೆ ನಿಂದು, ಎಳೆವೆಣ್ಗಳ್ ಆರಾದೊಡುಮಿರ್ಪರೊ ಎಂದು ಸೊರಮನಾಲಿಪ ಕಟ್ಟಳೆಯುಂಟು. ಅಂತೆ ಕೇಳ್ದು ನೀನೆಂದರಿತೊಡೆ, ನಿನ್ನನೆಂತುಂ ಬಿಡಂ, ತಾಗಿದ ಬೆರಲ್ಗೆಯೆ ತಾಗುವಂತೆ ಕಡೆಗೆನಗಿನ್ನೊಂದಪವಾದಮುಂ ನೆಲೆಗೊಳ್ಗುಂ"' ಎಂದು ಪೇಳುತಿರ್ದಳ್. ತದನಂತರಂ, ಅಬ್ಬೆ! ಇಸ್ಸಿ—ಇದೇತರ ಮಾತು "ಕಾಡೊಳ್ ಪುಲಿಯಿರ್ಪುದೆಂದು ನಾಡಿಂದೊಕ್ಕಲಂ ತೆಗೆವುದೆ?" ಎಂಬ ನಾಣ್ನುಡಿಯುಂ ಕೇಳ್ದುದು.

ಕೃಷ್ಣಂ — ಆಃ! ನಿನ್ನ ನುಡಿ ಅವಳ್ ಬಲ್ಸೊರ್ಕಿರ್ಪವೆಣ್ಣೆಂಬುದಂ ಸಮರ್ಥಿಪುದು. ಮಾತ್ರಮಲ್ಲದೆ ಆಕೆಯ ವಾಕ್ಯಸರಣಿಯೊಳ್, ರಸಿಕೆಯೆಂಬುದುಂ ಗ್ರಾಹ್ಯಮೆ, ಒಳ್ಳಿತಾಯ್ತು, ಅಂತಿರ್ಪಳೊಡನೆ ವಿಹರಿಸಿದನ ಜನ್ಮಮಲ್ತೆ ಸರ್ವೋತ್ಕೃಷ್ಟಂ? ಹುಂ, ರೋಗಿಗೆ ಮರ್ದೇ ಪಾಲಾಯ್ತು; ಸಾವನ್ನೆವರಂ, ನಿನ್ನುಪಕಾರಂ ಸ್ಮೃತಿಪಥಮನಗಲದು, ಕೃಷ್ಣನ ನಂದನಮೋಗಳುಮಿರ್ಕೆ."

ಗುಣಾಂ — "ಓ ಕೃಷ್ಣ, ಪರಿಗತ್ತಿಯೆಂದು ಕಲ್ಲಂ ಕಡಿದೊಡೆ

ಮಡಿಯದೆ? ಗುಣವರ್ಮನ ಮಾತಿದೆಂದು ಸೆರಂಗಿನೊಳ್ ಗಂಟಿಕ್ಕಿ ಕೊಳ್; ಆ ಚಂದನರಸಿಯುಂ ಮನದೊಳೆ ಕೂಡಲ್ವೇಳ್ಕುಮಲ್ಲದೆ, ಕಣ್ಣೊ ಳೊರ್ವರ್ ನೋಳ್ಪುದುಂ ಅಸಾಧ್ಯಮೆಂದೆಣಿಸು. ಆಕೆ ಬಲ್ಗಡುಸುಗಾತಿ ಕಣಾ."

ಕೃಷ್ಣಂ— (ನಕ್ಕು). "ಎನ್ನ ಜಾಣ್ಮೆಯೆಲ್ಲಂ ಕಾರ್ಯದೊಳೆ ಮೊಳೆಗುಮಲ್ಲದೆ ಬಾಯೊಳ್ ಪೊರಟು ಪಾಳಾಗದು. ಬಳಿಯಂ ನೀಮೆ ಕೊಂಡಾಡಲುಂಟು. ಒಂದು ಕಡೆಗಣ್ಣೋಟಮಂ, ಮೇಣೊಂದು ಮು ಗುಳ್ನಗೆಯುಂ, ಅಂತುಮೊಳಂಗಡೆಯೊಳೆ ಇರ್ದೊಡೆ ಒಂದು ಕೊಳಲ ಸವಿ ಸರಮನಾದೊಡುಮಾ ನಿಮ್ಮ ಗಡುಸುಗಾರ್ತಿ ಮಿಾರಿದೊಡೆ ತದನಂತರಂ ಪೇಳಿಂ ಹುಂ 'ಕೈನೆಲ್ಲಿಗೆ ಕೈಪಿಡಿಯೇಕೆ?'" ಎಂದು ಚಂದ್ರಾವಳಿಯೆ ಡೆಗೆ ಪೊರಡಲ್ ಸನ್ನದ್ಧನಾಗಿರ್ದಂ.

ಎಂಬಲ್ಲಿಗೆ ಚಂದ್ರಾವಳೀವಿಲಾಸದೊಳ್ ಪ್ರಥಮಾಶ್ವಾಸಂ.

---

ಅನ್ನೆಗಮಿತ್ತಮಾ ಚಂದ್ರಾವಳಿ— (ತನ್ನಬ್ಬೆಯ ಕಾಲ್ಗೆರಗಿ) "ಅಬ್ಬೆ ಈ ಬಿಸಿಲಜಳಮಂ ಸೈಸೆಂ, ಆಂ ಕೆಳದಿಯರ ಒಡಂಬೆರಸು ಉಪ ವನಕ್ಕೈದಿ ಜಲಕೇಳಿಗೊಂಡು ಬರ್ಪೆಂ, ಏನಾಗದೆ?"

**ಕುಲವತಿ**— (ಮಗಳಂ ತೆಗದಪ್ಪಿ ಮುುಂಡಾಡಿ). "ಬೇಡಂ, ಪೆರಗಡಿಯಿಡಲ್ ಬೇಡಂ, ಆಂ ಮೊದಲೇ ಪೇಳ್ದಿರ್ಪೆನಲ್ತೆ! ಆ ಕೃಷ್ಣಂಗೆ ಮುದುಕಿಯೆಂದಿಲ್ಲಂ ಜವ್ವನೆಯೆಂದಿಲ್ಲಂ, ಮೇಣೇಂ ನೋಡಿದ ಒಂದು ಪೆಣ್ಣೆ ರುಂಪೆಯಾದೊಡುಂ ಪುತ್ತಂ ಪುಗದು, ನೀನೆ ತಿಳಿದಿರ್ಪೆಯಲ್ತೆ ನಿನ್ನ ಅಕ್ಕನಂ ರಾಧೆಯುಂ ಅವಂ ಬಸಂಗೈದುದಂ. ಪೆರವೆಣ್ಗಳಂ ಕಿಡಿಪುದು ಅವನ ಪುಟ್ಟಿನ ಕಜ್ಜಂ. ಅಂತಿರೆ, ನವಯೌವನೆಯುಂ, ತ್ರಿಲೋಕಸುಂ ದರಿಯುಂ, ನಿನ್ನಂ ಅವಂ ಕಂಡೊಡೆ ಬಳಿಯುಂ ಏಂ ಪೇಳ್ವುದು? "ಪೂವಂ ಕುಯ್ವೆಡೆಯೊಳ್ ತುಂಬಿಯೊಂದೆರಗಿ ಮೊಗಮನಿನಿಸುಂ ಕೀರಿ ಇನಿಸುಂ ಗಾ ಯಮಾಗೆ, ಬಳಿಯುಂ ಸಜ್ಜೆವನೆಯೊಳ್ ಕಂಡು, ಇದೇನೆಂದು ಸಂದೆಗಂ

ಗೊಂಡು ಕೋಪಿಸಿ ಅಸಹ್ಯಮಾಗಿ ಬಡಿದು ಎರಳ್ಮೊರ್ದೆವಸಂ ವಿಮು ಖನಾಗಿರ್ದಂ ಕಾಂತನೆಂದು" ನಿನ್ನ ಗಂಡನ ಪರಿಯಂ ನೆನ್ನೆ ಇರುಳ್ ನೀನೆ ಪೇಳ್ದೀರ್ಪೆಯಲ್ತೆ? ಅದರಿಂ ಉದ್ಯಾನದಗಮನಮಂ ಮಾಣ್. ಎಂತುಂ ಸೆಕೆಯಂ ತಾಳಲಾರೆಯಾದೊಡೆ ಕೆಳದಿಯರೊಡನೆ ಅಂತಃಪುರದೊಳೆ ಪನಿ ನೀರ ಕೊಪ್ಪರಿಗೆಯೊಳ್ ಜಲಕವಾಡಿ ಕುಳಿರ್ಗೊಳಲಕ್ಕುಂ" ಎಂದು ಬುದ್ಧಿವೇಳ್ವತಾಯ್ಗೆ.

ಚಂದ್ರಾವಳಿ—"ಅಬ್ಬೆ, ಆ ಮೋಪಿನ ತರಳಂ ಕೃಷ್ಣನೆನಿಸರವಂ. ಅವಂಗೆಯೆ ಬೆದರ್ಪುದು? ಪೂಗಳೊಳೆಲ್ಲಂ ತಿರುಂಗಿದೊಡುಂ ತುಂಬಿ ಸಂಪಗೆಯಂ ಸೋಂಕುಗುಮೆ? ನಿನ್ನ ಕೃಷ್ಣಂ ಏನೆನ್ನಂ ಕಣ್ದೆರೆದೀಕ್ಷಿ ಪಂ? ಅಕ್ಕನಂ ವಶೀಕರಿಸಿದುದಿರ್ಕೆ 'ಬಸಿರೊಂದಾದೊಡುಂ ಬಾಯಿ ಎರಡಲ್ತುಮೆ?' ಎಂಬ ನಾಣ್ಣುಡಿಯಂತೆ ರಾಧೆ ಅವನಂ ಪೊಂದಿದಳ್. ಅದಿರ್ಕೆ, ಪಗಲಿನ ಗುಮ್ಮನಂತೆ ಮನೆಯೊಳಗೆ ಎಂತಿರ್ದೊಡುಂ ಅದಾ ವಸೊಗಂ? ಮೇಣುಂ, ಪೆಣ್ಬಳಗಂ ಇನಿತುಂ ಇರ್ಪಾಗಳ್ ಅವಂ ಗೈವುದೇಂ? ಆಂ ಪೋಗಿ ಬರ್ಪೆಂ."

ಕುಲವತಿ—"ಕೇಳೆನ್ನ ಕೊಂಡಾಟದ ಬೊಂಬೆ, ಈ ಪೆಣ್ಗಳು ಮಂ ನಂಬುವುದೆ? ಇವರೆಲ್ಲರುಂ ಕೃಷ್ಣನ ಮೆಯ್ಗಾಳಿ ಬಡಿದೊಡನೆಯೆ ನಿನ್ನಂ ಬಿಟ್ಟು ಅವನೆಡೆಗೆಯೆ ಪಾರ್ವರ್."

ಚಂದ್ರಾವಳಿ—"ಪುಟ್ಟು ಮೊದಲ್ ಎನಗೆ ಕೆಳದಿಯರ್ಕಳಾದಿ ವರ್ ಎನ್ನಂ ಬಿಡರ್; ಅಂತುಂ ಬಿಟ್ಟೊಡುಂ, 'ದಾರವಂದಂ ಬಲಮಾ ಗಿರೆ ಚೋರನೇಂಗೈವಂ?' ಎಂಬಂತೆವೊಲ್ ಎನ್ನ ಮನಂ ದೃಢಮಿರ್ಪಾ ಗಳ್ ಅವಂ ಗೆಯ್ವುದೇಂ?"

ಕುಲವತಿ— "ಮಗಳೆ, ನೀನಾಕೃಷ್ಣನಂದಮನರಿಯದೆ ಅವನಂ ಪುಲ್ಗೆಬಗೆವೆ; ಆತನೆಂತಾದೊಡುಂ ಗಂಡು, ನೀಂ ಪೆಣ್ಣು, ಅಂತಿರೆ ನಿನ್ನ ಸಾಸಮೆಲ್ಲಮವನೊಳ್ ಬಿರುಗಾಳಿಯ ಪಳ್ತಿಯೆನಿಜಂ. ಅಂತುಮಲ್ಲದೆ ಪೆಣ್ಗಳಂ ಮರುಳ್ಗೆಯ್ವೊಡೆ ಮಾರಂ ಗೈದೊಂದು ವಶ್ಯ ಯಂತ್ರಮೆನಲಿರ್ಪಂ

ಪಲವೇಂ, ಆ ನಂದಸುತಂ ನಿನ್ನಂ ಕಂಡೊಡೆ ಎಂತಾನುಂ ಬಿಡಂ ಸಂದೆಗಮಿಲ್ಲಂ, ಅಲ್ಲದೊಡೆ ನಿಕ್ಕುವಂ ಬೆಂದ ಭತ್ತಮಂ ಪುಟ್ಟಿಪೆಂ, ಪಿರಿಯರ ಮಾತಂ ಮೀರಲಾಗದೆಂಬರ್ ತಿಳಿದವರ್, ಅದರಿಂ ಜಲಕೇಳಿಗೆಂದೆಯ್ದಿ ಅಪವಾದದ ಬಿತ್ತಿಗೆ ನೀರಂ ಪೊಯ್ಯದಿರೆನ್ನ ಮಗಳೆ."

ಚಂದ್ರಾವಳಿ-"ಉಃ ಸಾಲ್ಗುಮಾತನ ಪೊಗಳ್ಕೆಯೆಲ್ಲಂ, ನಿನ್ನಂ ಮಾತಾಡಿ ಜಯಿಸಲ್ ಆಂ ಸಮರ್ಥಳಲ್ಲಂ, ಅದೆಂತಾನುಮಿರ್ಕೆ"—(ಎಂದು ಚಲವಿಡಿದು ಪೊರಡಲ್ ಉಜ್ಜುಗಿಪುದುಂ,)

ಕುಲವತಿ—"ಮಕ್ಕಳ್ ತನ್ನಿಂ ದೊಡ್ಡಿದರಾಗೆ ಅವರ ಮಾತನೆ ಕೇಳ್ವುದು. ಮತ್ತೇಂ ಗೆಯ್ವುದು? ಆದೊಡೆ ಬನದೊಳ್ ಕಳಕಳಧ್ವನಿಯಂ ಗೈಯದಿರಿಂ, ಕಂಕಣಮಂ ಅಲುಗಿಸದಿರಿಂ, ಮೆಯ್ಯಪರಿಮಳಂ ಪಸರಿಸದಂತೆ ಘೋಷಮಂ ಬಲಿದು ಮುಚ್ಚುವುದು ಪೆರ್ಚೇಂ? ಕಾಲಮಂ ಕಳೆಯದೆ ಜತನದಿಂ ಬರ್ಪುದು" ಎಂದು ಬುದ್ಧಿವೇಳ್ದು ಕೆಳದಿಯರಂ ಒದವಿಸಿದಳ್.

ಚಂದ್ರಾವಳಿ—"ಅಬ್ಬೆಯ ನುಡಿಗೆ ಬಾಯೊಳ್ ಆಯ್ತು" ಎಂದು ಕೆಳದಿಯರೊಡನೆ ದಂಡಿಗೆಯೊಳ್ಪೈದಿದಳ್.

ಅನ್ನೆಗಮಾ ಶ್ರೀಕೃಷ್ಣನ ವಿದೂಷಕನನೆ ಚರಿಸುತಿರ್ದ ಮಂದಮಾರುತಂ, ಇದೋ ಸಮೀಪ ಕೈತಂದಿರ್ಪಳ್ ಆ ಬಾಲೆಯೆಂದು ತಿಳಿಸುವಂತೆ, ಪೆಣ್ಗಳೊಡಂಬೆರದ ಚಂದ್ರಾವಳಿಯ ಮೆಯ್ಯ ಪರಿಮಳಮಂ ಕೊಂಡು ಗೋಪಾಲನಾಥನ ಮೂಗಿಗೆ ನಾಂಟಿಸಲೊಡಂ, ಆ ಕೃಷ್ಣಂ "ಓವೋ! ಇದೇಂ ಪರಿಮಳದೊಂದೇಳ್ತರಂ? ಆ ಚಂದ್ರಾವಳಿಯ ಶರೀರ ಗಂಧಮಂ ಕೊಂಡು ಪರಮಾನಂದದಿಂ ನೀನುಂ ಇನಿಸುಂ ಪರೀಕ್ಷಿಸೆಂದು ತಣ್ಣೆಲರೆ ತಂದಿತ್ತನೆ? ಅಂತಾದೊಡೆ ಓ ನಲ್ಗೆಳೆಯ ತಂಗಾಳಿಯೆ! ಆ ನಲ್ಲೆಯಂ ಪುಲ್ಲಾಕ್ಷಿಯಂ ಮುಟ್ಟಿದ ನೀನೆ ಕೃತಾರ್ಥಂ; ನಿನ್ನ ಸದಾಗತಿತ್ವಂ ಸಫಲಮಾಯ್ತು; ಆರ್ಗ್ಗಂ ಪೆಣ್ಗಳ ಬಿಸಯದೊಳ್ ಮಚ್ಚರಂಗಡ, ಮೋಹೇಂ ಎನಗುಂ ಮಚ್ಚರಮೆ, ಅಂತಿರೆ ನೀನೆನ

ಗೊರೆದುದು ನಿಜವಮಾದೊಡೆ ಏಗಳುಂ ಆಂ ನಿನ್ನ ನಿರ್ವ್ಯತ್ಸರತೆಗೆ ಕೃತಜ್ಞ ನಾಗಿರ್ಪೆಂ" (ಎಂದಲ್ಲಿಂ ಪೊರಟ್ಟೈತಂದು ಇನಿತುವಮಾಲಿಸಿ ಬೆರಗಿಂ) "ಆಃ ಇದೇಂ ನಲ್ಸರಂ?—(ಯೋಚಿಸಿ) ಓವೋ ಮಾನಿನಿಯುರ ಸಲ್ಲಾಪದ ಬೆಡಂಗು. ಏನಾ ಚಂದ್ರಾವಳಿಯೆ ಬಂದಿರ್ಪಳ್? ಅಂತಾದೊಡೆ ಎನ್ನ ಮುಂಜನ್ಮದ ಪುಣ್ಯಮೆ ನಿಜಂ—ಇರ್ಕೆ; ಇನಿತರೊಳೇಂ ಕಕ್ಕಾಬಿಕ್ಕಿ? ನೋಳ್ಪೆಂ" ಎಂದು ಮುಂದ್ವೈದಿ ಒಂದಶೋಕ ವೃಕ್ಷದ ಮರೆಯೊಳ್ ನಿಂದು ನಿಲುಕಿ ನೋಳ್ಪುದುಂ, ದಂಡಿಗೆಯಿಂನಿಳಿದು ತರುಣಿಯರೊಡ್ಡಿನೊಡನೆ ಆ ಚಂದ್ರಾವಳಿ ಅಲ್ಲಿನ ತಣ್ಗೊಳಕ್ಕೈತಂದು ಜಲಕೇಳಿಗೆಂದು ಪಟ್ಟೆದುಗುಲಂಗ ಳಂ ಪೆರ್ಚಿನ ಭೂಷಣಂಗಳುಮಂ ದಡದೊಳ್ ತೆಗೆದಿಟ್ಟು ಸರೋವರಕ್ಕಿಳಿ ದಿರ್ದಳ್.

ಒಡನಾ ಸುದೇವಂ—"ಏನಿದೆನ್ನ ಬಗೆಯಂತೆ ಬಂದವಳಿವಳ್ ಚಂದ್ರಾವಳಿಯೆ? ಇರ್ಕೆ" ಎಂದು ಕೆಲವುಂ ಕಲ್ಪರಲ್ಗಳಂ ಕೊಂಡು ಆ ಕೊಳದ ಸನಿಹದ ತಮಾಲವೃಕ್ಷಮನೇರ್ದಂ.

ಅನ್ನೆಗಮಾ ನೀರಾಟದೊಳ್ ಸೊಗಯಿಸುವ ಬಾಲಕಿಯುರೊಳ್ ಒರ್ವಳ್—ಎಲೆ ಚಂದ್ರಾವಳಿ, ಈ ಕೊಳದ ದಡಂಗಳ ಮರಂಗಳಂ ಅಡರ್ದ ಲತೆಗಳ್ ಲತಾಂಗಿಯಲ್ಗೆ ಒಳ್ದಾದಿಯಂ ತಿಳಿಯಿಸುವಂತಿರ್ಪುವಲ್ತೆ?

ಕೃಷ್ಣಂ—(ತನ್ನೊಳೆ ತಾಂ) "ಓ! ಈಕೆಯೆ ಚಂದ್ರಾವಳಿ; ಇನಿ ಸುಂ ಕೇಳ್ವೆಂ, ಪೆಣ್ಗಳ ಅಂತರ್ಗತಂಗಳೆಲ್ಲವುಂ ಬಿಚ್ಚುಗುವಿೂಗಳ್."

ಚಂದ್ರಾವಳಿ—(ನಕ್ಕು) ಕೆಳದಿ, ಪೆಣ್ಗಳ ಜನ್ಮಮುಂ ಅಂತೆಯೇ ಸಾನುರೂಪಪ್ರಿಯುರಂ ಪೊಂದಿದೊಡೆಯೆ ಸಾರ್ಥಕಂ.

ಕೃಷ್ಣಂ—(ತನ್ನೊಳೆ) "ಎಲೆ ಕಾಂತೆ, ಈ ಗುಟ್ಟನೆಣಿಸುವ ಬಲ್ಮೆ ಯುದು ನಿನ್ನೊಳಿರ್ದೊಡೆ ಆ ಚಂದನನೇಕೆ ಸೇರ್ದೆ? ಶಿವ! ಶಿವ! ನಿನ ಗುಮಾ ಕುರೂಪಿಯೊಡನೆ ಬಿನದಿಪ ಕಾಲಮೆ! ಕಷ್ಟಂ ಕಷ್ಟಂ! ಅವನ

ಮೊಗಮೋ ರಾಹುಗ್ರಸ್ತಚಂದ್ರಂ, ಅಂಗಂಗಳೋ ಕಲ್ಗಟ್ಟಿಗೆಗಳ್, ರೂಪಮೋ ವಿೂಯಿಸಿದ ಕೊಳ್ಳಿ."

ಸಖಿ—"ಚಂದ್ರಾವಳಿ, ಈ ಕಮಲಿನಿ ಅನುಕೂಲಮಪ್ಪ ನೀರಾಂತರಸಂಗದಿಂ ನಿನ್ನಂ ನಗುವಂತೆ ಏಂ ಮನಂಗೊಳಿಪುದು ನೋಡ!"

ಕೃಷ್ಣಂ—(ತನ್ನೊಳೆ) "ಈಕೆ ಬಲ್‌ಜಾಣೆ-ನಲ್ನುಡಿಯನೆ ಪೇಳ್ದಳ್; ಮನಕೊಪ್ಪಿದ ನೀರನನೆ ಪೊಂದುವ ಕಾಂತೆಯಂತೆ ಈ ಕಮಲಿನಿ ತಿಳಿನೀರನೆ ಪೊಂದಿರ್ಪುದು ತಕ್ಕುದಲ್ತೆ."

ಚಂದ್ರಾವಳಿ—"ಕೆಳದಿ, ಇರ್ಕೆ, ಆದೊಡೆ ಅದರಿಂ ಎನ್ನಂ ನಗುವಂತೆವೊಲ್ ಅಪ್ಪುದೆ?"

ಸಖಿ—"ಅದನಾನರಿಯೆಂ ನೀನೆ ಯೋಚಿಸು."

ಕೃಷ್ಣಂ—"ಓ ಈಕೆ ಎನ್ನ ನುಡಿಗೆಯೆ ಸಾಯಂ ಗೆಯ್ವಳ್."

ಚಂದ್ರಾವಳಿ—(ಒಡನರಿತು ನಸುಮುನಿಸಿಂ) "ಸಖಿ, ಸಾಲ್ಗುಂ ನೀನೆನ್ನಂ ಕೋಪಿಸದಿರ್."

ಸಖಿ—(ನಕ್ಕು) "ಕೆಳದಿರನ್ನೆ, ನಿನಗೇಂ ಕೋಪಂ? ನಿನ್ನ ಗಂಡಂ ಕುರೂಪಿ, ಅದರಿಂ ನಿನಗನುರೂಪನಲ್ಲನೆಂದು ಆನೇಂ ಬಾಯಿಂದುಸಿರ್ದೆನೆ?"

ಚಂದ್ರಾವಳಿ—"ಬಾಯಿಂದುಸಿರ್ದೊಡೇಂ ಪೆರ್ಚೆ? ಈ ನುಡಿಯು ಜಾಣ್ಮೆಯನೆಲ್ಲಂ ಆರ್ಗೆ ಕಲಿಸುವುದು?"

ಸಖಿ—"ಆಂ ಪೇಳ್ದುದು ತಪ್ಪಿತಮಾಯ್ತು, ಕೋಪಿಸದಿರ್. ನಿನ್ನರಸಂ ಅತಿ ಸುಂದರಂ, ಪಲವೇಂ, ಕೃಷ್ಣನಿನುಂ ಚೆಲ್ವಂ, ಸಂತಸಮಾಯ್ತೆ?"

ಚಂದ್ರಾವಳಿ—(ಬಲ್ಮುನಿಸಿಂ) "ಚೀಃ ಸಾಲ್ಗುಂ ನಿನ್ನ ಮೋಪಿನ ಬೆಣ್ಣೆಗಳ್ಳನ ಕೃಷ್ಣನ ನುಡಿಯಂ ಎನ್ನೊಳ್ ಎತ್ತದಿರ್, ಜತನಂ ಜತನಂ"

ಕೃಷ್ಣಂ—(ಮನದೊಳ್) "ಅಮಮಾ! ಇವಳ್ ಬಲ್ಗೊಸ್ಕರ್ಪೆಣ್ಣು! ಏನೆನ್ನಾಸೆಗೆ ಸೊನ್ನೆಯೆ? ಇರ್ಕೆ" (ಎಂದು ಎಳ್ಳನಿತುಂ ಮೈದೋರದಂತೆ ಕೊಂಬೆಗಳೆಡೆಯೊಳ್ ಅಡಂಗಿ ಚಂದ್ರಾವಳಿಯ ಮೈಗೊಂದು ಕಲ್ಪರಲಂ ಬಿಸುಂಟಂ.)

ಚಂದ್ರಾವಳಿ—(ಬಲ್ ಬೆರಗಿಂ ಸುತ್ತಂ ನೋಡಿ) "ಇದೇಂ ಆರೀಕಿರುಗಲ್ಲಂ ಮೆಯ್ಗೆ ಇಡುಕಿದರ್?" ಎಂಬನಿತರೊಳ್ ಮತ್ತೊಂದುಂ ಬೀಳ್ದುದು. ಒಡನುರಿದು ಚಂದ್ರಾವಳಿ, "ಇದಾರೋ ಕೂಳರೆ ನಿಜಂ, ಚೆಂದವನಂ ತಿಂಬೆನೆಂದು ಇಚ್ಛಿಸುವ ಮಂಕಡದಂತೆ ಮನದೊಳ್ ಏನೇನೊ ಯೋಚಿಸಿ ಅಡಂಗಿ ಕಲ್ಲನಿಸುವರ್. ಕಣ್ಗೆ ಕಂಡೊಡೆ ಮರ್ದಂ ಗೆಯ್ವೆಂ" ಎನೆ ಮತ್ತೊಂದುಂ ಇನ್ನೊಂದು. ಬೇರೊಂದುಂ ಎಂದಿಂತು ಪಲವುಂ ಕಲ್ಗಳ್ ಬೀಳ್ದುವು. ಆಚಣಂ ಆ ಪೆಣ್ಗಳೆಲ್ಲರುಂ—"ಸಖಿ, ಚಂದ್ರಾವಳಿ! ಇದೆಲ್ಲಮಾ ಕಿಟ್ಟನ ಕೆಲಸವೆ ನಿಜಂ. ಅದರಿಂ ಇನ್ನಿಲ್ಲಿರಲಾಗದು. ಅಂತುಂ ಇರ್ದೊಡೆ ಎಮಗೊಂದಪವಾದಂ."

ಚಂದ್ರಾವಳಿ—(ಮನದೊಳ್ ಬೆದರ್ದೊಡುಂ ಅಭಿಮಾನದ ಒಪ್ಪಮಂ ಪೂಸಿ) "ಕೆಳದಿಯರಿರ! ಆ ಕೃಷ್ಣನ ಪೋಕತನಂ ಎಲ್ಲಮಂ ತಿರ್ಕೆ, ಅದಾವಗಣ್ಯಂ? ಆದೊಡುಂ ಬಂದು ಕಾಲಂ ಪಿರಿದಾಯ್ತು, ಅಬ್ಬೆಯ ಮಾತಂ ಮೀರಲಾಗದು ಅದರಿಂ ಪೋಪಂ." ಎಂದು ಕೊಳದಿಂ ಮೇಲಡರ್ದು ದುಗುಲಂಗಳನುಟ್ಟು, ತೊಡವುಗಳಂ ತೊಟ್ಟು, ಬಂದಂತೆ ಪೊರಟು ಪೋದರ್.

ಅನಿತರೊಳಾ ವಾಸುದೇವಂ ಮರದಿಂದಿಳಿದು ಕವಲ್ದಾರಿಯೊಳ್ ಮುಂದೋಡಿ, ತಿರುಂಗಿ ಆ ಪೆಣ್ಗಳ ಮಾರ್ಗಕೆ ಇದಿರಾಗಿ ದಾರಿವೋಕ ನಂತೆ ನಡೆತಂದಂ. ಆಗಳ್ ತರುಣಿಯರ್ ಕೆಲರ್ ನಾಣ್ಚಿದರ್; ಪಲರ್ ಬೆದರ್ದರ್, "ಅದೋ! ಕೃಷ್ಣಂ ಬಂದಂ, ಬಂದಂ, ಎಂಬೊಂದು ಕಳಕಳದ ಒಳಮಾತಿನ ಗುಜುಗುಜು ಪೆಣ್ಗಳೊಡ್ಡಿನೊಳೆಲ್ಲಂ ತುಂಬಿದುದು, ಅನಿತ

ರೊಳಾ ಚಂದ್ರಾವಳಿ ದಂಡಿಗೆಯೊಳ್ ನಿಲುಕಿ ಕೃಷ್ಣನಂ ನೋಡಿ ಚೆಲ್ವಿಕೆಗೆ ಮರುಳಾಗಿ ಅಂತರ್ವಾಣನಂ ಪೋದೊಡುಂ ಬಹಿರ್ವಾಣನಂ ಕಿಡದೆ, "ಓವೋ! ಈತನ ಕತದಿಂದಮೆ ಇನಿಸುಂ ಕೋಳಾಹಳಂ? ಮೂರುಂ ಮಾಂಗಾಯನಿತರ ಬಾಲನಿವನಾವಲೆಕ್ಕಂ? ಇಲಿಯುಂ ಪುಲಿಯುಂ ಗೈವ ಎಣಿಕೆಗಳೆಲ್ಲವುಂ ಒಂದೆಡೆಯೊಳಿರ್ಕೆ."

ಎಂಬನ್ನೆಗಮಾ ಶ್ರೀ ಕೃಷ್ಣಂ ಮುಂಬಂದು, "ಓವೋ! ಇದಾರ್, ಎನ್ನನಚ್ಚಿನ ನಲ್ಲೆಯರಲ್ತೆ! ನೀಮಿನಿಬರುಂ ಒಡಂಗೂಡಿ ಈ ಬನಕೆ ಏಕೆ ಬಂದಿರ್ಪಿರಿಂ, ಪರಂತಪಂಗೆ ಕರುಣೆಯುಂಟೆ? ನಿಮ್ಮ ಬಾಗಿದ ತಳಿರ್ಮೆಯ್ಯ ಬಡತನಮುಂ ಇನಿಸುಮೆಣಿಸಂ, ಇದೋ! ಸಂತಾಪಂಗೆಯ್ವಂ."

ತರುಣಿಯರ್—(ತಮ್ಮೊಳ್ ನಕ್ಕು) "ಎಲೆ ಕೃಷ್ಣ, ಆ ಮೆಲ್ಲರುಂ ನಿರ್ದಯನಪ್ಪ ರವಿಯ ಜಳಮುಂ ಸೈಸದೆ ತಣ್ಗೊಳಮನಾಶ್ರಯಿಸಲೆಂದು ಬಂದೆವು."

ಕೃಷ್ಣಂ—"ಏಂ ತಪನನ ಕಾಟಮುಂ ತಣ್ಗೊಳಂ ನಿವಾರಿಸಿತೆ?"

ಕಾಂತೆಯರ್—"ಹುಂ ಆದೊಡುಂ ನಿನ್ನ ಕೊಳಲಂ ಕೇಳದೆ ನಿಸ್ಸೀಸವಾಗದು, ಇನಿಸುಂ ಬಾಜಿಸಿದೊಡಕ್ಕುಂ."

ಕೃಷ್ಣಂ—"ಕಾಂತೆಯರಿರ, ಈ ಮೆಯ್ಯನೆ ನಿಮಗೆಂದೇ ಮೀಸಲಂಗೆಯ್ದಿರಲ್ ಕೊಳಲಂ ಬಾಜಿಸನೆ? ಆದೊಡೆ ಎನಗೇನಾನುಂ ಬಹುಮಾನದುಡುಗೊರೆಯುಂ ಈಯಲ್ವೇಳ್ಕುಂ."

ತರುಣಿಯರ್—"ನಿನಗೆ ಪಲವುಂ ಉಡುಗೊರೆಗಳಂ ಮುನ್ನಮೆ ಕೊಟ್ಟಿರ್ಪೆವಲ್ತೆ? ಇನ್ನೇನೀವುದು? ಪೂರ್ವಪ್ರೇಮದಿಂ ಬಾಜಿಸಿದೊಡಕ್ಕುಂ"

ಕೃಷ್ಣಂ—"ನಿಮ್ಮ ನುಡಿಯೊಪ್ಪಿತಂ ಆದೊಡುಂ ನೆನ್ನೆಯುಂಡೊಡೆ ಇಂದಿನ ಪಸಿವುಂ ತಣಿಯದು, ಅದರಿಂ ಏನಾನುಂ ಪೊಸತಂ ಕೊಟ್ಟೊಡಕ್ಕುಂ, ಮೇಣೇಂ? ನಿಮ್ಮನೆಂದುಂ ಮರೆಯೆಂ.

ಪೆಣ್ಗಳ್ (ಪರಸ್ಪರಂ ನಕ್ಕು) "ಕೃಷ್ಣ, ಪೊಸತನೀಯಲ್ ಆಂ ಸಮರ್ಥರಲ್ಲಂ, ಆದೊಡೆ ನಿನ್ನ ಜಾಣ್ಮೆಗೆ ದೇವರೇ ಕುಡಿಸುಗುಂ, ಅದರ್ಕೆ ಎಮಗುಂ ಸಂತಸಮೆ."

ಕೃಷ್ಣಂ—"ಅಕ್ಕೆ, ನಿಮ್ಮ ನುಡಿಯೊಂದು ಪರಕೆಯಕ್ಕೆ" ಎಂದು ಮುರಲಿಯಂ ಪಿಡಿದು ಶ್ರುತಿಗೈದು.

ಕಂದ|| ಗಾನಂ ಪರಮಾನಂದಂ |
ಗಾನಂ ಸರ್ವಾರ್ಥಮಾರ್ಗಮುದರಿಂ ಗಾನ ||
ಜ್ಞಾನಿಯನೆ ನಿಂದಿಸಿದಪಂ |
ಶ್ವಾನನಿನತ್ತತ್ತಮೆಂದೊಡೇನತಿಶಯಮೋ ||

ಎಂಬೊಂದು ಪದ್ಯಮಂ ಶ್ರುತಿರಂಜನಿಯಿಂ ಬಾಜಿಸೆ ಪೆಣ್ಗಳಾನಂದ ಮಂ ಬಣ್ಣಿಪರಾರ್? ಚಂದ್ರಾವಳಿಯೊ, ಈ ಗಾನಾಮೃತಮಂ ಪೀರ್ದು ದರಿಂ ಆನಂದದಿಂ ಮೈಮರೆದು, ದಂಡಿಗೆಯೊಳಿರ್ಪೆನೊ, ನೆಲದೊಳಿರ್ಪೆನೊ, ಎಂಬುದನೆ ಅರಿಯದಾದಳ್.

ತದನಂತರಂ ಶ್ರೀ ಕೃಷ್ಣಂ (ಬೆರಗಂ ನಟಿಸಿ) "ಓ ತರುಣಿಯರಿರ, ನಿಮ್ಮ ನಡುವೆ ದಂಡಿಗೆಯೊಳ್ ಬರ್ಪವಳ್ ಇವಳಾರ್?"

ತರುಣಿಯರ್—"ಕೃಷ್ಣ, ಈಕೆ ಚಂದ್ರಾವಳಿಯೆಂಬವಳ್."

ಕೃಷ್ಣಂ—(ಯೋಚನೆಯಂ ನಟಿಸಿ) "ಅದಾರ್ ಚಂದ್ರಾವಳಿ ಯೆಂದೊಡೆ! ಇನ್ನೆವರಂ ಎನ್ನ ಲೆಕ್ಕಮಂ ಪೊಂದದ ಪೆಣ್ಗಳಾರುಂ ಗೋಕು ಲದೊಳಿಲ್ಲಂ, ಅಂತಿರಲ್, ಆನಿವಳಂ ಕೇಳ್ದುದುಂ ಕಂಡುದುಂ ಇಲ್ಲಂ."

ಕಾಂತೆಯರ್—(ನಸುನಕ್ಕು) "ಇಂತೆಲ್ಲಂ ಪೊಲ್ಲದುದಂ ಸೊಲ್ಲಿಸದಿರ್, ಇವಳ್ ಎಲ್ಲರಂತಲ್ಲಂ."

ಕೃಷ್ಣಂ—"ಅಂತೆ ಬಿಸೇಸದವಳಾದೊಡೆ ಎಂತುಂ ನೋಡಲ್ವೇಳ್ಕುಂ; ಇರ್ಕೆ, ಇವಳಬ್ಬೆಯಾರ್?"

ಪೆಣ್ಣೊಳ್—“ಇವಳ್ ಕುಲಪತಿಯ ಮಗಳ್, ನಿನ್ನ ರಾಧೆಗೆ ತಂಗೆ.”

ಕೃಷ್ಣಂ—“ಓ! ಅಂತಾದೊಡೆ ಕಬ್ಬಿನಜೇನಾಯ್ತು, ಬಾಂಧವ್ಯಮುಂ ಇರ್ಕುಮಲ್ತೆ?” (ಎಂದು ಮುಂದ್ಯೈದಿ ಆ ಚಂದ್ರಾವಳಿಯ ದಂಡಿಗೆಯುಂ ಪಿಡಿದು,) “ಓ, ಎನ್ನತ್ತಿಗೆ! ನಿನ್ನೊಳ್ ಎರಳ್ನುಡಿಯುಂ ನುಡಿಯಲ್ವೇಳ್ಕುಮೆಂದು ಮನದೊಳಿರ್ಕುಂ.”

ಚಂದ್ರಾವಳಿ—(ಅತಿ ಕೋಪಾವಿಷ್ಟಳಾಗಿ) “ಚಿಃ ಬೆಣ್ಣೆಗಳ್ಳರ ಗುರು, ಅದಾವತ್ತಿಗೆ? ನಿನ್ನ ಚರಿತ್ರಂಗಳನೆಲ್ಲವಂ ಕೇಳ್ದಿರ್ಪೆಂ, ಅದು ಎನ್ನೊಳ್ ಸಾಗದು ಕಣಾ, ಪಲವುಂ ನಾಳ್ವೆಣ್ಗಳ್ ನಿನ್ನ ಬೆಡಂಗುಗಳ್ಗೆ ಸೋಲ್ದಿರ್ಪರ್, ಎಂಬ ಪೇರ್ಮೆಯಿಂ ಏನೆನ್ನುಮಂ ಕೆಣಕಲ್ ಬರ್ಪೆಯು? ಸಾಲ್ಗುಂ ಉಸಿಕನಿರ್ದು, ಜತನದಿಂ ಪೋ, ಪೋ.”

ಕೃಷ್ಣಂ—“ಇದೇಂ ನೀಂ ಕಂಡೊಡನೆಯೆ ಸುಡು ನುಡಿಯುನೆತ್ತುವೆ? ಹುಂ, ಪೆಣ್ಗಳ ಬೈಗಳುಂ ಪೊಗಳ್ಕೆಯೆಂದೆನ್ನ ಎಣಿಕೆ, ಅದಿರ್ಕೆ, ನಿನ್ನಕ್ಕನಂ ವರಿಸಿರ್ಪೆಂ, ಅದರಿನೇ ಅತ್ತಿಗೆಯೆಂದೆಂ, ಅದೇಂ ಪೆರ್ಚೆ?”

ಚಂದ್ರಾವಳಿ—“ನಿನಗೀಕಿರುವರಯದೊಳೆ ಈ ಪೋಕತನಂ ಒಳ್ಳಿತಲ್ಲಂ, ಮಾತಾಡದೆ ದಾರಿಯುಂ ಬಿಟ್ಟು ಪೋ.”

ಕೃಷ್ಣಂ—“ಈ ಪೋಕತನವೀಗಳಲ್ಲಂ ಪುಟ್ಟಿನೊಡನೆಯೆ ಪುಟ್ಟಿರ್ಕುಂ ಅದರಿಂ ‘ಪುಟ್ಟುಗುಣಂ ಬಿಟ್ಟನುನಡದೊರ್ಡುಂ ಪೋಗದು’ ಎಂಬ ನಾಣ್ಣುಡಿಯಂತೆ ನೀನೆಂದೊಡೇಂ ಪೋಕುಮೆ? ಅದೆಲ್ಲಮಿರ್ಕೆ, ನಿನ್ನೊಡನೆ ಮಾತಾಡಲ್ ಎಂತೀಗಳ್ ಸಮಯಮಿರ್ಪುದೊ?”

ಚಂದ್ರಾವಳಿ—“ಹುಂ, ಗಳಪಿ, ಪೋ.”

ಕೃಷ್ಣಂ—“ಇದೇಂ ಕುಗ್ರಾಮದ ಪೆಣ್ಗಳಂತೆ ವಿರಸವಾಗಿ ನುಡಿವೆ? ಅದಂತೆ ಪೋಕೆ, ಎನ್ನ ನುಡಿ ಬೇರಾವುದುಂ ಅಲ್ಲಂ; ಆನೊಂದು ಮಹಾಕಾರ್ಯವಂ ಉಜ್ಜುಗಿಸಿರ್ಪೆಂ, ಅದರ್ಕೆ ಸಾಯಂಗೈಯಲ್ವೇಳ್ಕುಮೆಂದು.”

ಚಂದ್ರಾವಳಿ—"ಅದಾವುದು ಮಹಾಕಾರ್ಯಂ?"

ಕೃಷ್ಣಂ—"ಬೇರೇನುಮಲ್ಲಂ, ಒಂದು ವ್ರತಂ.

ಚಂದ್ರಾವಳಿ—"ಅದೇಂ ವ್ರತಂ? ಅಂತುಂ ವ್ರತನಾದೊಡೆ ಪೆಣ್ಣಿಂದಪ್ಪ ಸಾಯವಾವುದು?"

ಕೃಷ್ಣಂ—"ಎನ್ನ ವ್ರತಕೆ ಪೆಣ್ಗಳ ಸಾಯವೆ ಮುಖ್ಯಂ, ಬರಿದೆ ಅಮೌಲ್ಯವಾದ ಮಾತಂ ಬೆಲೆಯಿಲ್ಲದೆ ಪಾಳ್ಗೈವುದೇಕೆ? ನೀನಾಣೆಗೊಟ್ಟೊಡೆ ಪೇಳ್ವೆಂ"

ಚಂದ್ರಾವಳಿ—"ಅಕ್ಕೆ, ಮಹಾವ್ರತವಾದೊಡೆ ಎನ್ನಿಂದಪ್ಪುಪಕಾರಮಂಗೈವೆಂ ಸಂದೆಗವಿಡದಿರ್ ಎನ್ನಬ್ಬೆಯಾಣೆ."

ಕೃಷ್ಣಂ—"ಹುಂ, ಸಂಶಯದ ಬಿತ್ತಳಿದುದು; ಪೇಳ್ವೆಂ, ಆನೀದೇಶದ ಪೆಣ್ಗಳನೆಲ್ಲರಂ ವರಿಸುವ 'ಸರ್ವ ಕಾಂತಾ ವರಣಂ' ಎಂಬೊಂದು ನವೀನ ವ್ರತಮಂ ಎತ್ತಿರ್ಪೆಂ. ಅದರ್ಕೆ ಸಾಮಾನ್ಯಂ ನಿಮ್ಮ ಪೆಣ್ಗಳ ಜಾತಿಯೆಲ್ಲಂ 'ಪಲಂಬರ ಕೈವುಲ್ಲು ಒರ್ವನ ತಲೆವೊರೆ' ಎಂಬ ನುಡಿಯಂತೆ ಮನಃಪೂರ್ವಕಂ ಒಪ್ಪಿಗೆಗೊಟ್ಟು ಏಗಳುಂ ನೆರಂಗೆಯ್ವರ್. ದಯೆಯಿಟ್ಟು ಅನುಕೂಲೆಯಾಗಿ ಈ ವ್ರತಮಂ ಪೂರ್ತಿಸುವ ಭಾರಂ ನಿನ್ನೊಳ್, ಎಲ್ಲವನರಿತಳ್ಗೆ ಪೇರ್ಚೇಂ ಪೇಳ್ವುದು?"

ಚಂದ್ರಾವಳಿ—(ಮನದೊಳ್ ನಾಣ್ಚಿ ಮೊಗದೊಳುರಿದು) "ಚೀ ನಾಣಿಲಿ! ನಿನ್ನ ವ್ರತದ ಪೆಸರೆ! ಒಳ್ಮಾತಿಂ ಪೋದೊಡಾಯ್ತು, ಇಲ್ಲದೊಡೆ ತಕ್ಕುದಂ ಯೋಚಿಪೆಂ."

ಕೃಷ್ಣಂ—ಆಃ ಇದೇತರ ಮಾತು! "ಎಲೆ ಕಾಂತೆ, "ಪೋ" ಎಂದೊಡೆ ನಿನ್ನಾಣೆಗೆ ಔರ್ಧ್ವದೈಹಿಕವೆ? ನುಡಿಯುಂ ಬಿಡುವುದುಂ ಒಡಲಂ ಸುಡುವುದುಮೊಂದೆ ಎಂಬರ್ ತಿಳಿದರ್."

ಚಂದ್ರಾವಳಿ—“ಆಯ್ತಾಯ್ತು, ನಡೆ ನಡೆ.”

ಕೃಷ್ಣಂ—“ಇದು ‘ಗಂಟೆಗೊಂದೆ ಸೊರಂ’ ಎಂಬಂತೆಯೆ ಆಯ್ತು.”

ಚಂದ್ರಾವಳಿ—ಇದೋ ಸಾರಿ ಪೇಳ್ವೆಂ; ಈ ಮಾನಿನಿಯರಿದಿರೊಳ್ ಒಪ್ಪಿತಮಲ್ಲದುದಂ ನುಡಿಯದೆ ತೆರಳ್.”

ಕೃಷ್ಣಂ—“ಈ ಮಾನಿನಿಯರಿರ್ದೊಡೇನಾಯ್ತು? ಇದರ್ಕೆಯೆ ಇನಿಸುಂ ಕೋಪಮಂ ನಟಿಸುವುದು? ಅದರ್ಕೆ ಬೆದರದಿರ್ ಇವರೆಲ್ಲರುಂ ಎನ್ನವರೆ”

ಚಂದ್ರಾವಳಿ—“ಸಾಲ್ಗುಂ ಮತ್ತಮುಂ ಪೇಳ್ವೆಂ, ಅಪಮಾನಕರವಚನಮೆತ್ತುವುದೊಳ್ಳಿತಲ್ಲಂ.”

ಕೃಷ್ಣಂ—“ಆನೆಂದುದೇನಪಮಾನಕರಮೆ? ಎನ್ನ ನುಡಿಯಂ ಕೇಳ್ದೊಡನೆಯೆ, ಪೆಣ್ಗಡಣಮೆ ಆಜ್ಞಾನುಸಾರಮಾಗಿ ನಡೆಗುಂ; ಅಂತಿರೆ ಆನೇ ನಿನ್ನೆಡೆಗೆ ಬಂದು ಬೇಡುವುದೆಂದೊಡೆ ಬಹುಮಾನ ಮಲ್ತೆ?” (ಇನಿಸುಂ ಯೋಚಿಸಿ) “ನುಡಿಯೊಳ್ ಮೆಣಸು ನಡೆಯೊಳ್ ಉಣಿಸು” ಎಂಬುದು ಕೆಲವೆಣ್ಗಳ ಲಕ್ಷಣಂ, ಅದರಿಂ ಅಂತೆ ನುಡಿದೆಯಲ್ತೆ ಎನ್ನತ್ತಿಗೆ!”

ಮಿತ್ರಾವರ್ಗಳ್“ಎಲೆ ಕೃಷ್ಣ, ಕನ್ನಡಿಯ ಗಂಟಿಗೆ ಕೈಯಿಕ್ಕಿದಂತೆ ಚಂದಗೋಪನ ಕಾಂತೆಗಿವಳ್ಗೆ ಮರುಳಾಗದಿರ್, ಅದಸಾಧ್ಯಂ ಕಣಾ”

ಕೃಷ್ಣಂ—“ಲೋಕದೊಳ್ ಅಸಾಧ್ಯಮೆಂಬ ವಚನಮುಮಿರ್ಕೆ? ಅದು ಪೋಕೆ, ಏನಿವಳ್ ಆ ಪೆಸರಿನ ಚಂದನ ಅರಸಿಯೆ? ಕಷ್ಟಂ ಒಣಮರಕೆ ನವಮಲ್ಲಿಕಾಲತೆಯಂ ಪರ್ಬಿಸುವಂತೆ ಈಕೆಯನಾಕುರೂಪಿಶಿಖಾಮಣಿಗೆ ಗಂಟಿಕ್ಕಿದ ತಾಯ್ತಂದೆವಿರ್ ಏನೊಳ್ಳಿದರೊ? ಹುಂ—ಕೇಳೆಲೆ ಕಾಂತಾಮಣಿ!

ಕಂದ|| ಅನುರೂಪರನೊಂದದೆ ಕೇಳ್ |
ಘನದಾಸರ್ಗುರ್ಪ್ಪ ಸೀರಿನಂತರಸಿಕರೊಳ್ ||
ಮನಮಿಡೆ ಮೈಗಡದೊಳ್ ಜೀ |
ವನಮದು ಸಂತಾಪವಹ್ನಿಯಿಂದಾರದೇ ಪೇಳ್ ||

ಬಳಿಯುವೊರ್ವಳ್—"ಎಲ್ಲರೊಳ್ ನುಡಿವಂತೆ ಬಹು ಪತಿವ್ರತೆಯೊಳ್ ಈಕೆಯೊಳುಂ ನುಡಿವಯ್?"

ಕೃಷ್ಣಂ—"ಈಕೆ ಬಹು ಪತಿವ್ರತೆಯಾದೊಡೆ 'ಬಂಡಿಯುಂ ಪೊತ್ತಂಗೆ ತೃಣಂ ಭಾರವೆ?' ಎಂಬಂತೆ ಎನ್ನೆಣಿಕೆಗೆ ಏಕೆ ವಿಮುಖಳಾಗಿರ್ಪಳ್?"

ಚಂದ್ರಾವಳಿ—(ಕೋಪದಿಂ) "ಹುಂ, ಕಲ್ಗೆ ನೀರನೆರೆದಂತೆ ಇವಂಗೆ ಎನಿತುಮುಸಿರ್ದೊಡುಂ ಏಂ ಫಲಂ? ಎಲೆ ದೂತಿಯರಿರ! ಈತನಿಂದಪ್ಪುದೇಂ? ದಂಡಿಗೆ ಮುಂದೆ ಪೋಕೆ."

ಕೃಷ್ಣಂ—ಅಂತಾದೊಡೆ ಪೋಪ ಪುರುಳಂ ನೋಳ್ಪೆಂ, (ಎಂದು ದಂಡಿಗೆಯೊಳಯಿಂಕೆಗೊಂದು ಕೈಯಂ ಹಾಯ್ಕಿದಂ.)

ಒಡನಾ ಚಂದ್ರಾವಳಿ ಧುಮುಕಿ, "ಚಿಃ ಧೂರ್ತ! ಏನೆನ್ನಂ ನಾಡ ಗೋವಳಿತಿ ಯೆಂದೆಣಿಸಿರ್ಪೆಯೆ? ಎನ್ನ ಮೈಗೆ ಕೈಯಿಕ್ಕುವುದು ಬೆಣ್ಣೆಯ ಪಾತ್ರಕಿಕ್ಕುವಂತಲ್ಲಂ" (ಎಂದು ಕೃಷ್ಣನಂ ಪಿಡಿದು ನೂಂಕಿದಳ್.)

ಕೃಷ್ಣಂ—(ತನ್ನೊಳೆ) "ಆಃ ಈಕೆಯ ಕೈಯುದೇಂ ಮೆದುವೊ ಬೊಮ್ಮಂ ಈ ಕರಮನಾವುದರಿಂ ನಿರ್ಮಿಸಿದನಕ್ಕುಂ? ಹುಂ ಸಾಲ್ಗುಂ ಸಾಲ್ಗುಮೆಲೆಮನಮೆ! ಅಪ್ರಕೃತವಿಚಾರಕೀಗಳ್ ಸಮಯಮೆ? ಓ ಕಾಂತೆ! ನಿನ್ನ ಕೋಪಮೆಲ್ಲಂ ಎನ್ನಂ ನೂಂಕಿಯೆ ತೀರ್ಗುಮತ್ತೆ?"

ಚಂದ್ರಾವಳಿ—"ಎಲೆ ಸಖಿಯರಿರ! ನಿಮಗೆ ಏಂ ಕಣ್ಣುಂ ಕಿವಿಯುಮಿಲ್ಲವೆ? ಎನ್ನೊಳತಿಕ್ರಮುಂಗೈವ ಈತನಂ ಕಂಡುಂ ಬರಿದೆಯಿರ್ಪುದು ಅಬ್ಬೆಯ ಮಾತಂ ಪೂರ್ತಿಸಲೊ?" ಎನಲ್ ಆ ಪೆಣ್ಗಳೆಲ್ಲರುಂ ಚಂದ್ರಾವಳಿಯೊಳಿರ್ಪ ದಾಕ್ಷಿಣ್ಯದಿಂ ಕೃಷ್ಣನಂ ಮೇಲ್ವಾಯ್ದರ್.

ಬಳಿಯುಮಾವಾಸುದೇವಂ ಆ ಪೆಣ್ಗಳ ಮಧ್ಯದೊಳ್, ಅವರ್ ಸೆಳೆ

ದೊಡುಂ ನೋಂಕಿದೊಡುಂ ಅವುಂಕಿದೊಡುಂ ಅತ್ಯಾನಂದಂದಳೆದು, ನಿದ್ದೆಗಣ್ಣವನಂ ಪಾಸಿಗೆಗೆ ನೂಂಕಿದಂತೆ 'ಇದೆನ್ನ ವ್ರತದ ಒಂದು ಭಾಗವೆ ಆಯ್ತು' ಎಂದಂ. ಆಗಳ್ ಪೆಣ್ಗಳೆಲ್ಲರುಂ ನಕ್ಕರ್. ಚಂದ್ರಾವಳಿ, ಒಡನತಿಕೋಪದಿಂ ಪಿಡಿದು ನೂಂಕೆ—

ಕೃಷ್ಣಂ—ಇದೆನಗೆ ಸಮಯಮಲ್ಲವೆಂದೆಣಿಸಿ ಬೀಳ್ದಂತೆ ನಟಿಸಿ ಎಳ್ದೋಡಿದಂ.

ಚಂದ್ರಾವಳಿ—(ನಗೆಮುನಿಸಿಂ,) "ಏನೆನ್ನೊಳತಿಕ್ರಮಂಗೈವುದೆಂದೊಡೆ ಗೋವ್ಗಳಂ ಮೇಯಿಪುದೆ? ಕಲ್ಲಿಗೂಳಂ ಮುಕ್ಕುವುದೆ? ಅಳೆಮೊಗೆಯುಂ ಒಡೆವುದೆ?" ಎಂದು ಪರಿಪರಿಯಿಂ ಪರಿಹಾಸ್ಯಂಗೈದಳ್.

ಶ್ರೀ ಕೃಷ್ಣಂ—(ತಿರುಂಗಿ,) "ಎನ್ನೆಣಿಕೆಯುಂ ಪೂರ್ತಿಸದೊಡೆ ಇದು ಕೊಳಲಲ್ಲಂ; ಮೇಣೇಂ? ಆಂ ಕೃಷ್ಣನೆ ಅಲ್ಲಂ" ಎಂದು ಕೈವೆರಲಿಂ ಸನ್ನೆ ಗೈವುತ್ತಂ ನಡೆದಂ.

ಚಂದ್ರಾವಳಿ—ಹುಂ, ಆಯ್ತಾಯ್ತು ಕನಸಿನ ಧಾನ್ಯಕ್ಕೆ ಗೋಣಿಯುಂ ತಾಯೆಂದು, ನಕ್ಕು, ಅಭಿಮಾನಕ್ಕಿಂತೆಲ್ಲಂಗೈದೊಡುಂ ಕೃಷ್ಣನೊಳೆ ನೆಟ್ಟಮನದಿಂ ಹಾಸ್ಯಂಗೆಯ್ಯಲುಂ, ಬೈಯಲುಂ, ಎಂಬ ನೆವದಿಂ, ತಿರುಂಗಿ ನೋಡುತ್ತಂ, ನಂದಾತ್ಮಜನ ತಲೆ ಕಂಡುಂ ಕಾಣದಂತಾಗೆ ಶ್ರಮನಿಶ್ವಾಸಮನೆಂಬಂತೆ ಬಿರಯದ ಬಿಸುಸುಯ್ಲಂ ಬಿಡುತ್ತಂ, ಸೆಕೆಯದಿಮ್ಮಡಿಯಾಗೆ ಮಾತಾಡಿದ ಸಖಿಯರೊಳ್ ಬಿರುನುಡಿಯನೆನುತ್ತುಂ, ತಾಯ್ಮನೆಗೆ ಸರಿದಳ್.

(ಅಂತು ಪೋಗಿ ಅಬ್ಬೆಗೆ ಈ ವೃತ್ತಾಂತಮಂ ಪೇಳೆ.)

ಕುಲವತಿ—"ಮಗಳೆ, ಆಂ ಪೇಳ್ದಂತೆ ಕೆಲಸಂ ಕೆಟ್ಟುದು; ಕೃಷ್ಣನ ಕಣ್ಗೆ ಬೀಳ್ದವಳ್ಗೆ ಬೇರೆ ಗತಿಯಿಲ್ಲಂ. ಆ ಕೃಷ್ಣನ ಕಡೆಗಣ್ನೋಟಂ ಬೀಳ್ದೊಡೆ ಬಳಿಯಮವಳಂ ಎಂತಾನುಂ ಮನೆಯುಂ ಪುಗಿಸೆನೆಂದುಸಿರ್ದ

ನಿನ್ನ ಗಂಡನಂ ಪಲವುಮಾಣೆಗಳಿಂ ನಂಬಿಸಿ, ಬಾರದೆ ಬಹುವರ್ಷಂಗಳಾದುವಲ್ತೆ ಎಂದು ಮನಂಗೇಳದೆ ನಿನ್ನನೊಡಂಗೊಂಡು ಬಂದೆಂ, ಅದೆಂತಾನುಮಿರ್ಕೆ, ನೀನೀಗಳೆ ಗಂಡನ ಮನೆಗೆ ಪೋಗು" ಎಂದು ತಾಯ್ಮನೆಯಂ ಬಿಡುವ ಚಿಂತೆಯಿನೊ? ಬೇರೇನಾನುಂ ಯೋಚನೆಯಿನೊ? ಆಕೆಯ ಮನಮನಾರ್ ಕಂಡಿರ್ಪರ್? ಆದೊಡುಂ ರಸಿಕರ್ಗೆ ವಿರಹಾವಸ್ಥೆಯಂ ಸೂಚಿಸುತೆ ಕಣ್ಣೀರ್ವಿಡುವ ಚಂದ್ರಾವಳಿಯಂ ಪಲವೆಣ್ಗಳಿಂ ಕೂಡಿ ಕಳುಪಿದಳ್.

ಅನ್ನೆಗಮಿತ್ತಮಾ ಗೋಪೀಸುತಂ ಲಜ್ಜೆಯಂ ನಟಿಸಿ ತಲೆಯಂ ಬಾಗಿ ತನ್ನವರೆಡೆಗೆ ಪೋಪುದುಂ, ಆ ಕೃಷ್ಣನ ಪರಿಯಂ ಮರೆಯೊಳಿರ್ದು ಅರಿದ ಗೋವಳರೊಳೊರ್ವಂ, "ಓವೋ! ನಮ್ಮ ಕಿಟ್ಟನ ಮೋರೆಯ ಪುರುಳಂ ಕಂಡಿರೆ? ಚಂದ್ರಾವಳಿಯಂ ವರಿಸಿ ಬಂದಿರ್ಪಂ, ಪುಸಿಯಲ್ಲಂ. ಅದೋ ಪ್ರಣಯಕಲಹದೊಳ್ ಆದ ಉಗುರ ಗಾಯಂಗಳ್, ಕಣ್ಗೆ ಕಾಣ್ಕೆಗಳಕ್ಕುಂ. ಅಂತರ್ಯದ ಅನುರಾಗಮಂ ಪೊಳೆಯಿಸುವಂತೆ ರಕ್ತಂ ತೊಟ್ಟಿಡುಗುಮಿನಿಸಿನಿಸಂ. ಕಿರಿಯನಲ್ಲವೆ? ಅದರಿಂ ಲಜ್ಜೆಯಿಂ ತಲೆಯಂ ಬಾಗಿರ್ಪಂ".

ಎಲೆ ಕೃಷ್ಣ! ಚಂದ್ರಾವಳಿಯ ರೂಪಮುಂ, ನುಡಿಯುಂ, ಮೇಳಮುಂ, ಮೇಣೇಂ, ವಿಲಾಸಮುಮೆಲ್ಲಂ ಅನ್ಯಾದೃಶಮಲ್ತೆ?"

ಒರ್ವಂ—(ಉಸಿಕನಿರ್ಪ ಕೃಷ್ಣನ ಮೆಯ್ಯಂ ಮುಟ್ಟಿ,) "ಅಃ ಇದೇಂ ಮೆಯ್ಯೊಳೆಲ್ಲಂ ಧೂಳಿ!"

ಮತ್ತೊರ್ವಂ—"ಅದು ಧೂಳಿಯಲ್ಲಂ, ಸಮ್ಮೇಳದ ಆನಂದದೊಳ್ ಚಂದ್ರಾವಳಿ ಪೂಸಿದ ಗಂಧಾದ್ಯನುಲೇಪಮಕ್ಕುಂ."

ಅನ್ನಿಗಂ— "ಗಂಧಾದ್ಯನುಲೇಪಮಾದೊಡೆ ಏಂ ಪರಿಮಳಮಿಲ್ಲವೆ?"

ಮಣಿವರ್ಮಂ—"ಪರಿಮಳವಿಲ್ಲವೆ? ಮೂಗಿಗೆ ಕೆಲಸಮಂ ಕೊಟ್ಟೊಡೆ ಅರಿಯಲಕ್ಕುಂ."

ಶಂಖವರ್ಮಂ—(ಆಘ್ರಾಣನೆಯಂ ನಟಿಸಿ) ಹುಂ ಮೂಗಿನ ಕೆಲಸಮುಮಾಯ್ತು. "ಇದೇಂ? ಮಣ್ಣೇ."

ಮಣಿ—"ಅದೇನೋ ಆತುರದ ಒರಸೊರಸಿಂ ಮಣಮೆಲ್ಲಂ ಪೋಗಿರಲ್ ಸಾಲ್ಗುಂ."

ಬೇರೊರ್ವಂ—"ಇದೇಂ ತಲೆಗೂಂದಲ್ ಬಿರ್ಜಿ ಪತಾಕೆಯಂತೆ ಒಲೆಗುಂ."

ಶಂಖಂ—"ನೀನೇಂ ಸ್ತ್ರೀ ಗೋಷ್ಠಿಯ ಬ್ರಹ್ಮಾನಂದದ ಪೊಲ ಬನೆ ತಿಳಿಯದವನೆ? ಓ ನಿನಗಿನ್ನುಂ ಬಾಲ್ಯಮತ್ತೆ! ಕೇಳ್ ಆ ಕಾಲ ದೊಳಂತೆಲ್ಲಮಕ್ಕುಂ, ಮುಂದೆ ಪ್ರತ್ಯಕ್ಷಪ್ರಮಾಣಮಂ ಪೊಂದಿ ಸಂಶಯ ಮಂ ಕಳೆಯಲಕ್ಕುಂ"

ಬಳಿಯಂ ಗುಣವರ್ಮಂ (ನಕ್ಕು,) "ನೀಮೇಕೆ ಇಂತೆಲ್ಲಂ ಕೃಷ್ಣನಂ ಹಾಸ್ಯಂಗೈವುದು?"

ಶಂಖಂ—"ಏನಿದು ಹಾಸ್ಯಮೆ? ಅದೆಂತು?"

ಗುಣಂ—"ಆಂ ಕೃಷ್ಣನವಸ್ಥೆಗಳನೆಲ್ಲಮಂ ಮರೆಯೊಳಿರ್ದು ನೋಡಿದೆಂ.

ಶಂಖಂ—ಅದೇನವಸ್ಥೆಗಳೆಂದೊಡೆ?"

ಗುಣಂ—ಮೇಣೇಂ? ಪೆಣ್ಗಳೆಲ್ಲರುಂ ಸೇರ್ದು ಈಯಧಿಕಪ್ರಸಂಗಿ ಯಂ ನೂಂಕಿಯುಂ, ಸೆಳೆದುಂ, ಅವುಂಕಿಯುಂ, ಬಾರದ್ದ ಬನ್ನಮಂಗೈ ದರ್; ಇವನೇನೋ ಬಾಯ್ಗೆವಂದಂತೆ ಲಜ್ಜೆಯಿಲ್ಲದೆ ಗಳಪುತಿರ್ದಂ, ಎನ ಗದಂ ಈಗಳ್ ನುಡಿಯಲೇನಾಣಪ್ಪುದು. ಬಳಿಯಂ ಚಂದ್ರಾವಳಿ ಇವನ ನಲ್ಲಿಂ ನೂಂಕಿದಳ್ ಅದರಿಂ ಪೆರ್ಚು ಏನವಸ್ಥೆಗಳ್?"

ಗೋವಳರ್—(ಚಿಂತೆಯಂ ನಟಿಸಿ) "ಆಃ ಎಮ್ಮ ಕೆಳೆಯಂಗೆ ಈಯವಸ್ಥೆಯುಮಾಯ್ತೆ! ಆಣೆಗೊಟ್ಟು ಉಸಿರ್ದ ಮಾತಿಗುಂ ತಿಲೋದಕಮೆ? ಅದೆಂತಾನುಮಿರ್ಕೆ 'ತಲೆವೋಪಾಗಳ್ ಮುಂಡಾಸಿನ ಆಸೆಯೆ?' ಎಂಬಂತೆ, ಮೆಯ್ಗೆ ಬಂದಿರಲ್, ಮಾತಿನ ಅವಮಾನಮದೇಂ? ಎಲೆ ಕೃಷ್ಣ, ಮರ್ಯಾದೆಯೆಸಗದಿರ್. ವೈವೇನಗೆ ಮರ್ದಂ ಗೈಸಲ್ವೇಳ್ಕುಮೆ?"

ಗುಣಾಂ—"ಕೃಷ್ಣಂಗೆ ಔಷಧಮೇಕೆ? ಬೆಣ್ಣೆಯಂ ಕಳ್ವಾಗಳುಂ, ಪೆಣ್ಗಳಂ ಕೆಣಕುವಾಗಳುಂ, ಇಂತಪ್ಪ ಪೆಟ್ಟನೆನಿತಂ ತಿಂದನೊ? ಎನಿತಂ ತಿನಲಿರ್ಕುಮೊ? ಅದೆಲ್ಲಂ ಅವನ ಶರೀರ ಲಾಘವಕೆಯೆ ಕಾರಣಂ."

ಕೃಷ್ಣಂ—(ಕೋಪಿಸಿ) "ಇರ್ಕೆ ನಿಮ್ಮ ಪರಿಹಾಸ್ಯಂಗಳೆಲ್ಲವು ಮಿರ್ಕೆ.

ಕೇಳಿಂ, ಎಂಟನೆಯ ದಿನದೊಳ್ ಸೂರ್ಯನಸ್ತಂಗತನಪ್ಪುದರಿಂ ಮುನ್ನಮೆ ಈ ಕೃಷ್ಣಂ ಆ ಚಂದ್ರಾವಳಿಯಂ ಒಡಂಗೂಡಿದನೆಂಬ ವಾರ್ತೆಯೆ ನಿಮ್ಮ ಹಾಸ್ಯಮೆಂಬ ರೋಗಕೆ ಮರ್ದಂ ಮಾಳ್ಪುದು; ಇಲ್ಲದೊಡೆ, ಕೆಳೆಯನಾದ ಈ ನಂದಾತ್ಮಜನ ಮೊಗಮಂ ಕನಸಿನೊಳಲ್ಲದೆ ಜಾಗ್ರದವಸ್ಥೆಯೊಳೆಂದುಂ ಕಾಣಲಾರಿರಿಂ." ಎಂದಾಣೆಗೊಟ್ಟು ನುಡಿಯೆ.

ಮಣಿ—"ಏಂ ತರತರದ ಆಣೆಗಳ್ ಪುಟ್ಟುಗುಂ? ಈಗಳ್ ಆಣೆಯ ಬೆಲೆ ಕಿರಿದೆ?"

ಕೃಷ್ಣಂ—"ಕಿರಿದೋ, ಪಿರಿದೋ, ಎಂಬುದನರಿಯಲಕ್ಕುಂ ಕೆಲದಿನದೊಳ್, ಏಂ ಮೂಗಿಂ ಬಾಯ್ಗೆ ದೂರಮೆ?" ಎಂದವರೊಡನೆ ಅಲ್ಲಿಂ ತಳರ್ದಂ.

ಎಂಬಲ್ಲಿಗೆ ಚಂದ್ರಾವಳೀ ವಿಲಾಸದೊಳ್ ದ್ವಿತೀಯಾಶ್ವಾಸಂ.



ಇತ್ತಮಾ ಚಂದ್ರಾವಳಿ ಅಬ್ಬೆವನೆಯಿಂ ಒತ್ತಂಬದಿಂ ನಿರಾಶೆಯು ತಳೆವ ಗೋವಿನಂತೆ ಗಂಡನ ಮನೆಗೆ ಬಂದು, ಅಸ್ವಸ್ಥಮೆಂದುಂ ಇನ್ನು

ಮೇನೇನೋ ನೆವಮಂ ಪಿಡಿದುಂ, ಶಯ್ಯಾಗೃಹದೊಳೆ ಇರ್ದಳ್; ಓರೊ ರ್ವರ್ ಅರೆಗಣ್ಣೊಳ್ ನೋಡಿದೆಡೆಯನೆ ನೋಳ್ಪಳ್; ಮೇಣೊರ್ವರ್ ಬರಿದೆ ಕಣ್ಮುಚ್ಚಿ ಪವಡಿಸುವಳ್; ಬಳಿಯಂ ಒರ್ವರ್ ಗವಾಕ್ಷದೆಡೆಯೊಳ್ ದಿಟ್ಟಿ ಸುತ್ತಿರೆ, ತಂಗಾಳಿಯೊಡನೈತಂದು ಮೊಗಕೆರಗುವ ತುಂಬಿಯಂ ಕಂಡು, "ಓ ಅಳಿಯೆ! ನೀನೇಂ ಕೃಷ್ಣವರ್ಣಮಾತ್ರದ ಚೆಲ್ವಿಕೆಗೆ ಅಂ ಮರುಳ್ ಪ್ಪೆನೆಂದೆಣಿಸಿರ್ಪೆಯೆ? ಸಾಲ್ಗುಂ ಪೋ ಪೋ" ಎಂದು ನಿವಾರಿಪಳ್; ಪಲರ್ವರ್ ಕೊಳಲ್ಗೈಯನ ಚಿತ್ರಮಂ ಬರೆದು ನೋಳ್ಪಾಗಳ್, ಗಾಳಿಯು ರುಬೆಯಿಂ ಆ ಸಜ್ಜೆಗೋಣೆಯ ಕದಂ ತಿರ್ರನೆ ತೆರೆಯೆ ಕಳವಳವಾಂತು ಆ ಚಿತ್ರಪತ್ರಮಂ ನುಂಗುವಳ್; ತಾನೇನಾನುಂ ಕೈಗೊದವಿದ ಕೊಳವಿ ಗಳಂ ಪೂರಯಿಸಿ ಅಪಸ್ವರಮಂ ಸೈಸದೆ, "ಛೀ ಈ ಎನ್ನ ಬಾಳ್ಕೆಯೇಕೆ? ಎಲೆ ವೇಣು, ಆ ಕೃಷ್ಣನ ತುಡಿಯ ಸವಿಯಂ ಇಳೆಗೊರೆವಂತಿರ್ಪ ನಿನ್ನ ಸುಸ್ವರಮನಾವಂ ಬಣ್ಣಿಪಂ? ಆ ನಂದಾತ್ಮಜನ ಕೈಯಂ ಪೊಂದಿದುದರಿಂ ಏನಾನಂದಮನಿತ್ತಪೆಯೊ! ಪೆರ್ಚೇಂ? ನಿನ್ನ ಜನ್ಮಂ ಸಾರ್ಥಕಮಾಯ್ತು. ನಿನ್ನ ವಂಶಮೇ ವಂಶಮೆಂದಾಯ್ತು. ಹುಂ, ಇಂತೆಲ್ಲಂ ಮರುಳಿನಂತೆ ಗಳ ಪಿದೊಡೆ ಏಂ ಫಲಮೊ? ಆವುದಕುಂ ಅಕ್ಕನಂ ಕಂಡೊಡಕ್ಕುಂ, ಏಂ ಗೈವೆಂ? ಆರಂ ಕಳುಪುವೆಂ?" ಎಂಬನಿತರೊಳ್ 'ಭವತಿ ಭಿಕ್ಷಾಂದೇಹಿ' ಎಂಬೊರ್ವ ಯಾಚಕ ವಿಪ್ರನ ಸೊರಮಂ ಕೇಳ್ದು, ಮನೆಯವರ್ ಎತ್ತೆ ತ್ತಮೋ ಪೋಗಿರ್ದುದರಿಂ, ತಾನೇ ಪೆರಗೈದಿ ವಿಪ್ರಂಗೆ ಸತ್ಕಾರಂಗೈದು ಕುಶಲಮಂ ಕೇಳ್ದು ಪ್ರಸಂಗವರಿದಿಂ "ಎಲೆ ಭೂಸುರಾಗ್ರಣಿ! ನೀನಿನ್ನೆ ವರಂ ಆವಾವ ದೇಸಂಗಳ್ಗೆ ಐದಿದೆ? ಉಂಛಧಾನ್ಯಮುಂ ಪಣಮುಂ ಎನಿತ್ತಾದುದು?

ವಿಪ್ರಂ—"ಕೇಳಿಲೆ ತರುಣೀಮಣಿ, ಅಂ ಸಾಧಾರಣಂ ಊರೆ ಲ್ಲಂ ತಿರುಂಗಿದೆಂ, ಗೋಕುಲಮೊಂದು ಮಾತ್ರಮುಳಿದಿರ್ಕುಂ. ಮೇಣೇಂ? ಈಗಳ್ ಧಾನ್ಯಕ್ಕೆ ಬೆಲೆಯಧಿಕಮೆಂದು ಪೇಳಲೆಡೆಯುಂಟು, ಅದರಿಂ ಆರುಂ ಕುಡುವುದನಿಳಿಂಕೆ ಗೈದಿರ್ಪರ್. ಮೇಣೇಂ ಪಣಮಂ ಕುಡಲುಂ ಕೈ ಪಿಂದೆ. ಕಳ್ತಲೆಯುವರ್ ಸೊಡದರ್ಾರಿಯಂ ಕಾಣ್ಬರ್, ಸೊಡರಿ

ನವರ್ ಕಳ್ತಲೆದಾರಿಯುಂ ಕಾಣರ್, ಅಂತಾಪರಿಯಿಂ, ದೊಡ್ಡಿದರಿರಮಂ ಬಡವರ್ ತಿಳಿವರ್, ಅವರ್ ಬಡತನದ ಪೊಲಬನೆ ತಿಳಿಯರ್. ಇನ್ನುಂ ಪಲಂಬರ್ ಬೆಕ್ಕು ಪಿಟ್ಟೆಯುಂ ಬೈತಿಡುವಂತೆ ಧನಮನಡಂಗಿಸುವರಲ್ಲದೆ, ಬಡವರ್ಗಿನಿತಾನುಮೀಯರ್ ಅಂತುಮಲ್ಲದೆ

ಕಂ|| ಕಾಲಂ ಪಿಡಿದು ಧರಿಸೆ ತಲೆ
ಮೇಲಕೆ ನೆರಲಂ ಕೊಡುವುದು ಕೊಡೆಕೊಡೆನೆನದೆ ||
ಓಲಗಿಸಿದೊಡೆಂತುಂದು
ಶ್ರೀಲಂಕಾನೀಯನೆಳ್ಳಿನನಿತುಮನಹಹಾ ||

ಎಂದು ಕಬ್ಬಿಗರುಸಿರ್ವುದುಂ ನಿಜಮಾಯ್ತು—ಅದಿರ್ಕೆ, ಇನ್ನೆಮ್ಮಂತಿರ್ಪವರ್ ಸಂಸಾರದ ಪೊಡೆಯುಂ ಪೊರೆವುದೆಂತೊ? ಅಃ ಬಡವರ್ಗೆಯೆ, ಮನೆದುಂಬಿ ಮರಿಮಕ್ಕಳನೀವ ಬಿದಿಯ ಮಾಟಮನೇನೆಂಬೆನೊ!" ಎಂದು, ಪರಿಪರಿಯಿಂ ಪಳಯಿಸುತ್ತಿರಲ್.

ಚಂದ್ರಾ—"ಬರಿದೆ ಚಿಂತಿಸಿ ಏಳ್ಗರದ ಮುದುಪನಿದಂ ಇರ್ಮಡಿಗೈಯದಿರ್; ಇದೆಕೊಳ್, ಪೊರಲಾರ್ಪನಿತುಮಕ್ಕಿಯುಮಂ, ಪಣಮುಮಂ ಈವೆಂ; ಮನೆಯವರ್ ಬೈವರ್, ಅದರಿಂ ಅವರ್ ಬರ್ಪುದರಿಂ ಮುನ್ನಮೆ ಪೋಗು." ಎಂದು ಅಂತೆಯೆ ಕೊಟ್ಟು ಕಾಲ್ವಿಡಿದು.

"ನೀನಿನಿತಂ ಎನಗೆ ಒಳ್ಳಿತನೆಸಗಲ್ವೇಳ್ಕುಂ. ಎಳವರಯದ ಪೆಣ್ಣೀಕೆ ಪಳೆ ಮುದುಕನಪ್ಪೆನ್ನೊಳ್ ಊಳಿಗಮಂ ಪೇಳ್ದಳೆಂದೆಣಿಸದಿರ್".

ವಿಪ್ರ—"(ಮಗಳೆ) ಅಂತೆನ್ನೊಳ್ ಕವಲೆಣಿಕೆಯನೂರದಿರ್ ಮೈಗೈಗಳಿನಪ್ಪುದನೆಂತಾನುಂ ಗೈವೆಂ, ಅದೇಂ ಪೇಳ್".

ಚಂದ್ರಾ—"ಪಾರ್ವರಗ್ಗಳ! ಪೆರ್ಚೇನುಮಿಲ್ಲಂ, ನೀನಿನ್ನು ಪೋಗಲುಳಿದ ಗೋಕುಲಕ್ಕೈದಲುಂಟೊ?"

ವಿಪ್ರ—"ಹುಂ, ಉಂಟು; ನಿನಗೇನಾನುಂ ಕಾರ್ಯಮಿರ್ದೊಡೆ ಅತ್ಯವಶ್ಯಂ."

ಚಂದ್ರಾ—"ಎನಗೆಂದೇ ಪೋಪುದಂ ಮಾಣ್, ಸ್ವಕಾರ್ಯದಿಂ ಪೋದೊಡೆ, ಅಲ್ಲಿ ರಾಧೆ ಯೆಂಬ ಎನ್ನಕ್ಕನುಂಟು, ಅವಳಂ ಕಾಣದೆ ಚಣಂ ಯುಗವಾಗಿರ್ಕುಂ. ಅದರಿನೀಪರಿಯಂ ಪೇಳಿ, ಒರ್ಮೆ ಆಕೆಯನಿಲ್ಲಿಗೆ ಬರ್ಪಂತೆ ಗೈದೊಡಕ್ಕುಂ."

ವಿಪ್ರಂ—"ಎನ್ನಬ್ಬೆ ಇದೇಂ ಪೆರ್ಚಿನ ಊಳಿಗಮೆ? ಮಾವಿಗೆ ನೀರೆರೆವುದರೊಳೇ ಪಿತೃತರ್ಪಣಮಂ ಪೂರಯಿಸಿದಂತೆ, ಎಂತಾನುಂ ಪೋಪ ಕಜ್ಜದೊಡನೆಯೆ ನಿನ್ನ ಕೆಲಸಮನುಂ ಗೈವೆಂ ನುಡಿಗೇಂ ನಷ್ಟಂ?" ಎಂದಲ್ಲಿಂ ಪೊರಟ್ಟೈದಿದಂ—ಅಂತೆ ಗೋಕುಲಕ್ಕೈತಂದು ಗೊಲ್ಲರ ಕೇರಿಯೊಳ್ ಪ್ರತಿಗೃಹಮನುಂ ಪೊಕ್ಕು ಯಾಚ್ಞಾದ್ರವ್ಯಮಂ ಕೊಂಡು, ವಿಚಾರಿಸುತೆ ರಾಧೆಯ ಮನೆಗೆಯ್ದಿದಂ—ಆಗಳ್ ಮನೆಗೆಲಸದ ಅಸವಸದಿಂ, ರಾಧೆಯೊಳಂಗಡೆಯೊಳೆ ಇರ್ದಳ್. ಕೃಷ್ಣನುಂ ಒಡನೆ ಇನಿಸಿನಿಸುಮಾಕೆಯಂ ಕೆಣಕುತುಮಿರ್ದಂ. ಅಂತಿರೆ ಪೆರಗಣಿಂ "ಭವತಿ ಭಿಕ್ಷಾಂ ದೇಹಿ" ಎಂಬ ನಿಡುಸರಂ ಕೇಳಿಸಿತು. ಮನೆಗಜ್ಜದ ಎಳ್ತರದಿಂ ರಾಧೆಯುದನರಿತಳಿಲ್ಲಂ.

ಕೃಷ್ಣಂ—ಆರವಮಂ ಕೇಳ್ದೋಡಿವಂದು, ದ್ವಿಜನಂ ಆತಿಥ್ಯದಿಂ ಮನ್ನಿಸಿ, ಆಕಾರದಿನೇ ಆತನ ವೃತ್ತಿಯನರಿತು ಧರ್ಮಮನೀಯೆ—

ವಿಪ್ರಂ—(ಅದಂಕೊಂಡು) ಓ ಚೆಲ್ವಣ್ಣ ರಾಧೆಯ ಮನೆಯಿದೆಂದು ಆರೋ ಪೇಳ್ದರ್, ಅವಳ್ ಈಗಳೇನೊಳಗಿಲ್ಲವೆ?

ಕೃಷ್ಣಂ—ಇರ್ಪಳ್, ಆಕೆಯೊಳೇಂ ಕಜ್ಜಂ?

ವಿಪ್ರಂ—ಬಿಸೇಸಮಿಲ್ಲಂ, ಸಿಂಧು ಗ್ರಾಮದೊಳಿರ್ಪ ರಾಧೆಯ ನುಚಿ ಚಂದ್ರಾವಳಿಯೆಂಬಳ್ ಅಕ್ಕಂಗಿನಿಸನೊರೆಯಲ್ವೇಳ್ಕುಮೆಂದು ಪೇಳ್ದಳ್. ಅದರಿನಾರಾಧೆಯಂ ಕರೆದೊಡಕ್ಕುಂ.

ಕೃಷ್ಣಂ—(ಘಟದೀಪದಂತೆ ಒಳಗಣ ಸಂತಸದಿಂ) ಹುಂ (ಎಂದು ತಟಕ್ಕನೆ ರಾಧೆಯ್ಯೆತಂದೊಡೆ ಏಂಗೈವುದು? ಎಂಬ ಭಯದಿನುಂ ಒಳ

ಗೈದಿ, 'ಅದಂ ಗೆಯ್ಯಲ್ವೇಳ್ಕುಂ, ಇದಂ ಮಾಳ್ಪುದವಶ್ಯಂ', ಎಂದಾಕೆಯಂ ಕೆಲಸದೊಳೆ ನಿಯೋಗಿಸಿ ಬಂದು)—ವಿಪ್ರ! ಅವಳ್ಗೆ ಇನಿಸುಮಸ್ವಸ್ಥಂ, ಅದಿರ್ಕೆ, ಅಂತಲ್ಲದೆ ಗಾಢನಿದ್ರೆ. ಅದರಿಂ ಎಚ್ಚರಿಪುದಸಾಧ್ಯಂ ಅಂತುಮಲ್ಲದೆ, ನಿದ್ರಾಭಂಗಂ ಅಕಾರ್ಯಮಲ್ತೆ? ಅದಿರ್ಕೆ ಚಂದ್ರಾವಳಿ ಏನೊರೆದಳ್ ಪೇಳ್, ಆನೆ ರಾಧೆಗುಸಿರ್ವೆಂ ಏನಾಗದೆ?

ಪಾರ್ವಂ—ಅಕ್ಕುಂ, ಚಂದ್ರಾವಳಿಗೆ ಅಕ್ಕನಂ ಕಾಣದೆ ದಿನಂ ಪೋಪುದಿಲ್ಲಮಂತೆ. ಅದರಿಂ ಅಗ್ರಜೆಯುಂ ಒರ್ಮೆ ಬರ್ಪಂತೆ ಪೇಳಲ್ವೇಳ್ಕುಮೆಂದು ಬೆನ್ನನೆ ಬಂದು ಮೂರುಂ ಮೂರುಂ ಬಾರಿ ನುಡಿದಿರ್ಪಳ್.

ಕೃಷ್ಣಂ—ಅಕ್ಕೆ, ತಂತಮ್ಮ ಬಂಧುಗಳಂ ನೋಳ್ಪುದೆಂದೊಡೆ ಆರ್ಗಂ ಕುತೂಹಲಾಸ್ಪದಮೆ, ಅಂತಿರೆ ಅಸ್ವತಂತ್ರೆಯರಪ್ಪ ಅಬಲೆಯರ್ಗೆ ಏಂ ಪೇಳ್ವುದು?

ವಿಪ್ರಂ—ಅಂತಾದೊಡೆ ಆಂ ಪೋಪೆಂ, ಪೇಳಲ್ ಮರೆತು, 'ನಾಡಾಡಿಯಪ್ಪ ದ್ವಿಜಂಗೆ ಬಿಕ್ಕೆಯುಂ ಕುಡುವೆಡೆಯೊಳೆ ಗುರುತಲ್ಲದೆ ಬಳಿಯುಮುಂಟೆ' ಎಂಬ ಆ ಚಂದ್ರಾವಳಿಯ ನುಡಿಗೆನ್ನಂ ಈಡೆಸಗದಿರ್.

ಕೃಷ್ಣಂ—ಇನಿತರೊಳುಂ ಸಂದೆಗಮೆ? ಒಪ್ಪಿದ ಮೇಲೆ ಎಂತಾನುಂ ಈ ರಾಧೆಯಂ ಚಂದ್ರಾವಳಿಯೊಡಂಗೂಡಿಪ ಭಾರಮೆನ್ನೊಳಲ್ತೆ. (ಎನೆ) ಆಯ್ತು, ಎಂದಾವಿಪ್ರಂ ತೆರಳ್ದಂ—

ಬಳಿಯುಂ ಕೃಷ್ಣಂ ಪುಡುಕುವ ಮರ್ದುವಳ್ಳಿಯೆ ಕಾಲ್ಗೆಸುತ್ತಿದುದು ಎಂದು ಬಗೆದು, ಆಚಣಮೆ ಪೊರಟು ರಾಧೆಯ ರೂಪಮನೆ ಧರಿಸಿ, ನೋಳ್ಪ ವಿಟರ ಎರ್ದೆ ಝಲ್ಲೆನೆ ಮದಗತಿಯ ಗಾಡಿಯಿಂ, ಅಂಗಭಂಗಿಗಳ ಮೋಡಿಯಿಂ, ಸಿಂಧುಗ್ರಾಮದೊಳಿರ್ಪ ಚಂದವ ಮನೆಗೆ ಬಂದಂ. ಅಂತೆ ಬಂದು ಮನೆಯ ಒಳಪುಗುವುದುಂ.

ಚಂದನ ಅಬ್ಬೆ ಸುಮುಖಿ, 'ಓ ಚಂದ್ರಾವಳಿ! ಇದೋ ನಿನ್ನಕ್ಕಂ

ಬಂದಳ್' ಎಂದು ಪೇರ್ಸರದಿಂ ಕರೆದುಸಿರ್ದು, ರಾಧೆಗೆ ಪರಿಪರಿಯ ಸತ್ಕಾರಂ ಗೆಯ್ದಳ್. ಒಡನಾ ಚಂದ್ರಾವಳಿಯುಂ ಓಡಿ ವಂದು ಅಕ್ಕಂಗೆರಗೆ—

ಕೃತ್ರಿಮೆ—ಓ ಪರಮಪ್ರಿಯೆಯಪ್ಪ ತಂಗೆ! ಸೊಬಗಿನ ಕಣಿಯಪ್ಪನಲ್ಲನೊಡನೆ ಸೊಗಂ ಬಾಳ್ವೆ (ಎಂದು ಪರಸಿದಳ್.)

ಚಂದ್ರಾ—ಅಕ್ಕ! ಆಂ ನಿನ್ನಂ ಕಾಣದೆ ಎನಿತ್ತೋ ಬರಿಸವಾಯ್ತು. ಕಣ್ಗಳಿವು ನಿನ್ನನೆ ಪುಡುಕುತಿರ್ದುವು. ಇಂದಿಗೆ ಸಫಲಮಾಯ್ತು.

ಕೃತ್ರಿಮೆ—(ನಕ್ಕು) ಹುಂ ಸಾಲ್ಗುಂ. ನಿನ್ನ ನಲ್ಮೆಯೆಲ್ಲವಂ ಆನರಿಯೆನೆ? ಆ ಬಿತ್ತರಮೆಲ್ಲಂ ಒಂದೆಡೆಯೊಳೆ ಇರ್ಕೆ.

ಚಂದ್ರಾ—ಅಕ್ಕ, ಇದೇಂ ನಿನ್ನ ನುಡಿಯೊಳ್ ಕೊಂಕು? ಅಂತೇ ನಾನುಂ ತಪ್ಪಿತಮಿರ್ದೊಡೆ ಕಿರಿಯಳೊಳ್ ಪೇಳಲಾಗದೆ?

ಕೃತ್ರಿಮೆ—ಪೇಳ್ವುದೇಂ? ಮೊನ್ನೆ ಅಬ್ಬೆವನೆಗೆ ನೀನೆಯ್ತಂದುಂ ಎನ್ನಂ ಲಕ್ಷಿಸದೆಯೆ ಇತ್ತಲ್ ಬಂದುದರಿನೇ, ಪ್ರೀತಿಯ ತೆರನೆಲ್ಲಂ ನಿರ್ಣಯಮಾಯ್ತು. ಆನೋ ನೀಂ ಬಂದಿರ್ಪೆಯೆಂದು ಎನಿತ್ತಾತುರದೊಳ್ ಇರ್ದೆನೆಂಬುದಂ ಬಲ್ಲರೆ ಬಲ್ಲರ್.

ಸುಮುಖಿ—ರಾಧೆ! ಅವಳ್ ಮೊದಲೇ ಪೇಳ್ದಳತ್ತೆ. ಆಂ ಕಿರಿಯಳೆಂದು ಅದರಿಂ ಆಕೆಯ ತಪ್ಪಂ ಕ್ಷಮಿಸಿ, ತಂಗೆಯುಂ ನೀನಾದೊಡುಂ ನೋಡಿ ಬಿನದಿಸಲ್ಕೇನಾಯ್ತು?

ಕೃತ್ರಿಮೆ—ಅತ್ತೆ! ನೀಂ ಸೊಸೆಗೆ ಸಾಯಮಂ ಗೆಯ್ದಪೆ ಹುಂ ಇರ್ಕೆ. ಕಳೆದ ಬಿಸಯಂಗಳೆಲ್ಲವುಮಿರ್ಕೆ. (ಈ ಪರಿಯಿಂ ಸರಸಸಲ್ಲಾಪಂಗಳಿಂ ಪೊಳ್ತಿನಿಸುಂ ಕಳೆಯೆ,)

ಕೃತ್ರಿಮೆ—ಎರಳ್ಮೂರ್ದೆವಸಕೆ ಒರ್ಮೆಯಾದೊಡುಂ ನಿಮ್ಮಂ ನೋಡಿ ಮುದಂದಾಳ್ವೆನೆಂದೊಡುಂ ಅದೃಷ್ಟವಶದಿಂ ಮನೆಯಿದು ಇನಿತ್ತುಂ ದೂರಮಾಯ್ತು.

ಸುಮುಖಿ—ಮನೆ ದೂರವಾದೊಡೇಂ ಮನಂ ಸಮೀಪಮಲ್ತೆ? ಒರ್ವರ್ ಬಂದೊಡೆ ಪತ್ತುಂದಿನಮಿರ್ದು ಪೋದೊಡಾಯ್ತು, ಮತ್ತೇಂ?

ಕೃತ್ರಿಮೆ—ಅಕ್ಕುಂ ಇನ್ನೆಂದು ಮಂತಕ್ಕುಂ.

ಸುಮುಖಿ—ಎಂದು ಮೆಂದೇಂ, ಇಂದುಂ ನಿನ್ನಂ ಪೋಗಲಾರ್ ಬಿಡುವರ್?

ಕೃತ್ರಿಮೆ—ಆಂ ಬರ್ಪಾಗಳ್ ಮನೆಯೊಳ್ ಪೇಳ್ದೆನಿಲ್ಲಂ. ಅದರಿಂ ಪೋಗದೊಡೆ ಬೈವರ್.

ಸುಮುಖಿ—ನಿನ್ನಂ ಬೈವುದೆಲ್ಲಮಿರ್ಕೆ, ಅಂತುಂ ಪೋಗಲ್ವೇಳ್ಕುಮಾದೊಡೆ ಎರಳ್ಮೂರ್ವಗಲಾದೊಡುಮಿರ್ದು ಪೋಪುದು. ಮನೆವಾಳ್ತೆಯಂ, ನಾಡಿನಂದಮಂ, ಬಂಧುಗಳ ಪರಿಯಂ, ಒಂದುಮಂ ಕೇಳ್ದೆನಿಲ್ಲಂ.

ಕೃತ್ರಿಮೆ—("ಒಳಗಣ ಗುಟ್ಟಂ ಶಿವನೇ ಬಲ್ಲಂ" ಎಂಬಂತೆ) ಎಮ್ಮ ಮನೆಯಂದಂ ಆರ್ಗುಮರಿಯದು. ಅದರಿನೀಗಳ್ ಪೋಪೆಂ ಇನ್ನೊರ್ಮೆ ಬರ್ಪೆಂ, ಮೇಣೇಂ ಆನಿಂದಿಲ್ಲಿ ಕೂಂತೊಡೆ ಮುಳ್ಳ ಮೇಲೆ ಕೂಂತಂತೆಯೆ ವಲಂ.

ಸುಮುಖಿ—ಓವೋ ಮಾತಿನ ಪುರುಳೆ, ನಿನ್ನೊಳ್ ನುಡಿಯಲ್ ಈ ಪಳ್ಳಿಯ ಪೆಣ್ಗಳೆಂತು ನೆರೆವರ್? ಅದೆಲ್ಲಮಿರ್ಕೆ, ನಿನ್ನ ತಂಗೆಗೆ ಕನಸಿನೊಳುಂ "ಅಕ್ಕಂ ಅಕ್ಕಂ" ಎಂಬೊಂದು ಮಂತ್ರಂ, ಅದರಿಂ ಪೋಪೊಡೆ ಅವಳನೊಪ್ಪಿಸಿ ಪೋಗು.

ಚಂದ್ರಾ—ಅಕ್ಕ! ಮನೆಯೊಳ್ ನಿನಗಿರ್ಪ ಕಜ್ಜಂಗಳನೆಲ್ಲಮಂ ಆನರಿವೆಂ, ಅದಿರ್ಕೆ, ನೀನಿಂದು ಪೋದೊಡೆ ಎನ್ನ ಎಂದಿನ ಕನಸಿನಂತೆ ಇದುಮೊಂದು ಕನಸೇ.

ಕೃತ್ರಿಮೆ—ಕೇಳೆನ್ನ ಮನೋರಮೆ! ನೀನುಮಿಂತುಟು ಚಲವಿಡಿಯಲಾಗದು. ನಿನಗೆ ಮಾತ್ರಮಲ್ಲಂ ನಿನ್ನಿಂ ಪತ್ತುಂಮಡಿ ನಿನ್ನಂ ನೋಡಲಾಸೆ ಈ ರಾಧೆಗುಮುಂಟು. ಆ ನುಡಿಯಿರ್ಕೆ, ಪೆಣ್ಗಳ್ ಮನೆಯೊಳ್

ಪೇಳದೆಯೆ ಬೇರೆಡೆಯೊಳಿರುಳಂ ಕಳೆದೊಡೆ ಏನರ್ಥಂ? ನೀನೇನರಿಯದಳೆ? ಇದೋ ಸಂಜೆಯುವುಂಟಿತು, ಪೋಪೆಂ.

ಚಂದಂ—(ನಸುನಕ್ಕು) ಓ ಅತ್ತಿಗೆ! ಜಾಣ್ಮೆಗಳೆಲ್ಲವುಮಿರ್ಕೆ. ನೀನೇ ಗೃಹಾಧಿದೇವತೆಯಾಗಿರಲ್ ಪೊರಡುವಾಗಳ್ ಚಾವಡಿಯೊಳ್ ಪೇಳ್ವುದೊ? ಬಾಗಿಲೊಳೊ? ಅದು ಪೋಕೆ, ನಿನ್ನ ನುಡಿಯನೆ ಮಹಾ ಪ್ರಸಾದಮೆಂದು ತಲೆಯೊಳೆ ಪೊತ್ತು ನಡೆಯಿಪನಾಕೃಷ್ಣಂ, ಅಂತಿರೆ ಬಯಲೊಳ್ ಅಡಂಗುವುದೇಕೆ? 'ಕೃಷ್ಣನಂ ಬಿಟ್ಟೊಡೆ ಈ ರಾತ್ರಿಯೊಳ್ ಜೀವಂ ನಿಲ್ಲದು' ಎಂದುಸಿರಲಾಗದೆ? ಅಂತೆ ಜೀವಂ ನಿಲ್ಲದೊಡುಮೊಂದು ಉಪಾಯಮುಂಟು. ಪಲವುಂಬಗೆಯ ಶಾಸ್ತ್ರಂಗಳೊಳುಂ, ಲೌಕಿಕಾಚಾರದೊಳುಂ, ಉಪಾಯಮಿಲ್ಲದೊಡೆ ಒಂದಕೆ ಪಡಿಯಾಗಿ ತತ್ಸದೃಶವಸ್ತುವನಿನ್ನೊಂದಂ ಗೈಯಲಕ್ಕುಮೆಂಬ ಬಿದಿಯುಂಟು; ಅದರಿಂ ಅದರಂತೆ ಈ ಇರುಳೊಂದಕೆ, ಸಮಾನವ್ಯಕ್ತಿಯನೊದವಿಪೆಂ ಏನಾಗದೆ?

ಕೃತ್ರಿಮೆ—(ಆ ನುಡಿಯುಂ ಕೇಳ್ದು ರೋಷಾವೇಷಮಂ ನಟಿಸಿ ಜಗ್ಗನೇಳ್ದು) ಎಲೆಲೆ ಚಂದ! ಏನೆನ್ನಂ ಸೂಳೆವೆಣ್ಣೆಂದು ಎಣಿಸಿರ್ಪೆಯೆ? ವಿಶ್ವವಲ್ಲಭನ ಶ್ರೀ ಕೃಷ್ಣನ ನಲ್ಮೆಯ ನಲ್ಲೆಯಾದೆನದರೊಳೇಂಕುಂದು? ಏಂ ನಿನ್ನ ಶಾಸ್ತ್ರಾಚಾರಂ ಲೋಕಾಚಾರಮೆಂಬಿವುಗಳ್ ಎನಗೆ ಮಾತ್ರಂ ಪುಟ್ಟಿದುವೆ? ಹುಂ "ಉಪ್ಪಂ ತಿಂದವಂ ನೀರಂ ಕುಡಿವಂ" "ತಲೆಗೆರೆದ ನೀರ್ ಕಾಲ್ಗಿಳಿಗುಂ" ಸೊರ್ಕಂ ತಳೆದುದರ್ಕೆ ತಕ್ಕ ಫಲಮಂ ತಿಂಬೆ. ಅದೆಂತಾನುಮಿರ್ಕೆ (ಎಂದು ಚಂದ್ರಾವಳಿಯುಂ ನೋಡಿ ಕಣ್ಣಂ ಪೊಸೆದು ಎಂತಾನುಂ ಕಣ್ಣೀರಂ ಸುರಿಸಿ–) ಎಲೆ ತಂಗೆ! ಆನಿಂದಲ್ಲದೊಡೆ ಮುಂದೆ ಏಗಳುಂ ಬರಲ್ವೇಳ್ಕುಮೆಂದೆಣಿಸಿರ್ದೆಂ, ಆದೊಡೆ ಈ ದುರುಳನ ನಿನ್ನ ಗಂಡನ ನುಡಿಯಿಂ ಅದರ್ಕೆ ಉತ್ತರಕ್ರಿಯೆಯಾಯ್ತು. ನೀಂ ಪೇಳಿ ಕಳುಪಿದೆಯಲ್ತೆ, ಎಂದು ಮನಂಗೇಳದೆ ಬಂದುದರ್ಕೆ, ಎನಗೆ ಮನ್ನಣೆಯಾಯ್ತು, ಇನ್ನುಂ ಆಳನಟ್ಟಿ ಎನಗಶನಮುಂ ನೀರುಂ ಮೆಯ್ಗೆ ಪಿಡಿಯದಂತೆ ಮಾಡದಿರ್, ಇದಂತ್ಯದರ್ಶನಂ, ಇದರೊಳ್ ಆಂ ನಿನ್ನಂ ನೀನೆನ್ನಂ ಮರೆವುದು

(ಎಂದು ಆಲಿಂಗನಂಗೆಯ್ದು ಪರಮಾನಂದದಿಂ ಬಗೆಯೊಳ್ ನಕ್ಕು ಬಿಸಿಲ್ಮ ಳೆಯಂತೆ ಕಣ್ಣೀರಂ ಸುರಿಸಿ) ಓ ಅತ್ತೆ! ಎನ್ನಂತಿರ್ಪ ಗಣಿಕೆಯರ್ ನಿಮ್ಮ ನ್ನರ ಮನೆಯಂ ಪುಗಲಾಗದು, ಆಂ ಬಂದುದು ತಪ್ಪಿತವಾಯ್ತು, ಈ ಬಾಲಕಿಯಾಳನಟ್ಟಿದಳೆಂದು ಮುಂದರಿಯದೆ ಬಂದುದರ್ಕೆ ಕೋಪಿಸದಿರಿಂ, (ಎಂದು ಪೊರಟಳ್).

ಚಂದ್ರಾ—ಮನೆಯವರ ಭಯದಿಂ ರಾಧೆಯಂ ಎವೆಯಿಕ್ಕದೆ ನೋಡುತ್ತಂ ಮರುಗುತಿರ್ದಳ್.

ಕೃತ್ರಿಮೆ—ಎಲೆ ಬಾಲೆ! ನೀನೇಕೆ ಅಳ್ವಪೆ? "ಕೊಟ್ಟ ಕೂಸು ಕುಲದಿಂ ಪೆರಗೆ" ಎಂಬ ನಾಣ್ನುಡಿಯಂ ತಿಳಿಯೆಯ? ಬರಿದೆ ಚಿಂತಿಸಿ ಮೆದುಮೆಯ್ಯಂ ದಂಡಿಸದಿರ್ (ಎಂದು ಪಿಂದೆ ನೋಡದೆ ಪೋದಳ್).

ಒಡನಾಸುಮುಖಿ—(ಓಡಿವಂದು ಕೃತ್ರಿಮೆಯಿದಿರೊಳ್ ನಿಂದು) ಎಲೆ ರಾಧೆ! ಚಂದನ ಪರಿಯಂ ನೀನಿನ್ನುಂ ತಿಳಿಯದವಳೆ? ಅವಂ ಯೋಚಿಸಿ ನುಡಿವುದಲ್ಲಂ, ನುಡಿದು ಯೋಚಿಪುದು, ಅದರಿಂ ಅವನ ಮಾತಿರ್ಕೆ; ಎನ್ನನುಂ, ನಿನ್ನ ತಂಗೆಯನುಂ, ನೋಡಿಯಾದೊಡುಮಿಂದು ಪೋಗಲಾ ಗದು.

ಕೃತ್ರಿಮೆ—ಅತ್ತೆ! ನಿನ್ನ ಮನದಿರವಂ ಆನರಿಯೆನೆ? ನಿನಗಿದೋ ಸಾಸಿರಸೂಳ್ ವಂದಿಪೆಂ. ಅದು ಪೋಕೆ, ಮರದ ಬಂದಣಿಕೆಯಂತೆ ಯುಂ, ತಣ್ಗೊಳದ ಪಾವಸೆಯಂತೆಯುಂ, ನಿನ್ನ ಬಸಿರೊಳ್ ಪುಟ್ಟಿದ ಈ ಕೂಳಂ ಇರ್ದೆಡೆಯೊಳಿರ್ದೊಡೆ ಬಳಿಯಮೆನ್ನಂ ಮನೆಯಂ ಪುಗಿಸರ್. ಅದರಿನಿವನಿರ್ಪ ಮಾಡೊಳ್ ನೀರಂ ಮುಟ್ಟೆಂ.

ಸುಮುಖಿ—ಎಲೆ ಚಂದ! ಮನೆಯವರೆಂದಿಲ್ಲಂ, ಬಂದವರೆಂದಿ ಲ್ಲಂ, ಬಾಯ್ಗೆವಂದಂತೆ ಗಳಪಿ ಎಮ್ಮ ಕುಲಕೊಂದು ಬಹುಮಾನಮಂ ತಂದೆ; ಸಾಲ್ಗುಂ, ಇನ್ನಾನುಂ ನಿನ್ನತ್ತಿಗೆಯಂ ಸಂತಯಿಸು. ಪಿರಿಯಳಂ ಬೇಡಿದೊಡೆ ನಿನ್ನ ಮಾನಂ ಕಿರಿದಾಗದು (ಎಂದು ಮೂದಲಿಸೆ)

ಕೃತ್ರಿಮೆ--ಅತ್ತೆ! ಇದೇತರ ಮಾತು? ನಿನ್ನ ಮಗಂ ಅತಿಪ್ರವೀಣಂ, ಶಾಸ್ತ್ರಾದಿಗಳ ಆಚಾರಂಗಳಂ ಉದ್ಧರಿಪ ವೈಮಂ, ಎನ್ನೊಳ್ ಬೇಡುವುದೆಂದೊಡೇಂ? ಆವುದುಂ ಬೇಡಂ, ಅವನಿರ್ದೆಡೆಗೆಯೆ ಕೈ ಮುಗಿವೆಂ (ಎಂದು ಮೆಲ್ಲನಡಿಯಿಡೆ)

ಚಂದಂ--(ಓಡಿವಂದು ಎರಗಿ) ಅತ್ತಿಗೆ! ಆಂ ತರಳತೆಯಿಂ ಪಿಂಮುಂದರಿಯದೆ ನುಡಿದ, ಅಪರಾಧಮನೆಲ್ಲಂ ಕ್ಷಮಿಸು. ನೀನೆನಗೆ ತಾಯ್ಗೆ ಪಾಸಟಿ, ಅಂತುಮಲ್ಲದೆ ನೀನಿರ್ಪ ಮಾಡಿನ ಒಳಗಟ್ಟಿಗೆ ಆಂ ಬರ್ಪುದಿಲ್ಲಂ, ಎನ್ನಬ್ಬೆಯಾಣೆ, ಕುಲದೈವದಾಣೆ, ಮೇಣೇಂ ಎಂತಾನು ಮಿಂದು ಪೋಗಲಾಗದು.

ಕೃತ್ರಿಮೆ--(ತನ್ನೊಳೆ ತಾಂ) ಓ ಚಂದನಿವಂ ತನ್ನ ಕೊರಲ್ಗೆ ತಾನೇ ಉರುಲಂ ಬಿಗಿದಂ. "ಮೂಢೊ ಮೂರ್ಖೊ ಗರ್ದಭಶ್ಚೈಕ ರಾಶಿಃ" ಎಂಬೊಂದು ನುಡಿ ಈತಂಗೆಯೆ ನಿದರ್ಶನಂ.

ಬಳಿಯಂ ಚಂದ್ರಾವಳಿಯುಂ, ಸುಮುಖಿಯುಂ, ಕೋಪಮನಿಡದಿರೆಂದು ಕಾಡಿದರ್.

ಕೃತ್ರಿಮೆ — ಆಯ್ತು, ನೀಮೆಲ್ಲರುಮಿಂತು ನುಡಿವುದಾದೊಡೆ ಎನಗಿನಿಸುಂ ಕೋಪಮಿಲ್ಲಂ. ಪೊಳ್ತಾದೊಡೆ ಮೀರಿತು, ಈಗಳ್ ಪೋಗಿವರ್ಪೆಂ.

ಚಂದಂ—ನೀನೀಗಳ್ ಪೋದೊಡೆ ಕೋಪದಿನೇ ಎಂದಾಯ್ತು. ಅಂತುಮಲ್ಲದೆ ಸಂಜೆಯುಮಿದೋ ಸನ್ನಣಮಂ ಗೆಯ್ಗಂ, ಮೇಣೇಂ ಎನಗೇನುಂ ಸಮಾಧಾನಮಿಲ್ಲಂ, ಇದರಿಂ ಮೇಲೆ ನಿನ್ನ ಚಿತ್ತಂ, ಪೆರ್ಚೇಂ ಪೇಳ್ವುದು? (ಸುಮುಖಿಯಂ ನೋಡಿ) ಅಬ್ಬೆ! ಅಂತಲ್ತೆ?

ಕೃತ್ರಿಮೆ—(ತನ್ನೊಳ್) ಇದಂ ಬಿಟ್ಟೊಡೆ ಸಮಯಂ ಬೇರಿಲ್ಲಂ— (ಎಂದು) ಚಂದ! ನಿಮ್ಮೆಲ್ಲರ ನುಡಿಯಂ ಮೀರಲುಂ, ಮರುಗುವೀ ಚಂದ್ರಾವಳಿಯಂ ನೋಡಿ ಸೈಸಲುಮಾರೆಂ, ಅಕ್ಕೆ, ಮನೆಯೊಳ್ ಬಂದು

ದಂ ಎಂತಾನುಂ ನೋೞ್ಪೆಂ, ಮತ್ತೇಂ ಮಾೞ್ಪುದು (ಎಂದು ತಿರುಂಗಿ ಅವರೊಡನೆ ಮನೆಯಂ ಪೊಕ್ಕಳ್).

ಆ ಸಮಯದೊಳ್ ಸೂರ್ಯಂ, ಇನ್ನುಮಾಂ ಇಂತಿರ್ದೊಡೆ, ಜಗತ್ಪ್ರಿತಂ ವಾಸುದೇವಂ, ಮುನಿಯದಿರಂ, ಎಂದೆಣಿಸುತ್ತಮೆಂಬಂತೆವೊಲ್ ಅಸ್ತಂಗತನಾದಂ.

ಬಳಿಯಂ ಚಂದಂ ಗೃಹಾಂತರದೊಳೆ ಇರೆ, ಎಲ್ಲರುಂ ಕಾಲಾನುಸಾರದಿಂ ಭೋಜನಮಂ ತೀರ್ಚಿ, ಚಾವಡಿಯೊಳ್ ನಾಡಬಿಸಯಂಗಳನೆತ್ತುತಿರಲ್, ನಡೆದ ದಣಿವಿನೆಂಬಂತೆವೊಲ್ ಕೃತ್ರಿಮೆಯ ಮಾತ್ರುಂ ಕಣ್ಣುಂ ಮುಚ್ಚುತಿರೆ—ಸುಮುಖಿ—ಚಂದ್ರಾವಳಿ! ದೂರಂ ನಡೆದು ಬಲ್‌ದಣಿದಿರ್ಪಳ್ ನಿನ್ನಕ್ಕಂ, ಅದರಿಂ ಅವಳೊಡನೆ ಸಜ್ಜೆವನೆಗೆ ಐದು

ಕೃತ್ರಿಮೆ—(ನಕ್ಕು) ಅತ್ತೆ! ಏನಾಂ ಚಂದ್ರಾವಳಿಯೊಡನೆ ಪವಡಿಸುವುದೆ?

ಚಂದಂ—ಅಂಗಳದೊಳ್ ತಂಗಾಳಿಗೆ ತಿರುಂಗುತಿರ್ದವಂ ಬಾಯ್ದೆರೆದು, ನುಡಿಯಲ್ ಬೆದರ್ದು ಮನದೊಳೆ "ಚಂದ್ರಾವಳಿಯಲ್ಲದೆ ಕೃಷ್ಣನೆಲ್ಲಿರ್ಪಂ?"

ಸುಮುಖಿ—ಏಂ ನಿನ್ನ ತಂಗೆಯೊಡನೆ ನಿದ್ರಿಸಲುಂ ಸಂದೇಹಮೆ?

ಕೃತ್ರಿಮೆ—(ನಕ್ಕು) ಕಾಣ್ಬಗೆ ಎನಗೆ ತಂಗೆಯಾದೊಡುಂ ನಿನ್ನ ಚಂದನ ಅಧೀನದೊಳಿರ್ಪಳತ್ತೆ, ಅದರಿಂದಂತೆ ಪೇಳ್ದೆಂ.

ಚಂದಂ—ಇದೇನತ್ತಿಗೆ! ಮಳೆ ಬಿಟ್ಟ ಮರದ ಅಡಿಯಂತೆ ಪೆರಗಿಲ್ಲದೊಡುಂ ನಿನ್ನ ಒಳಗಣ ಮಚ್ಚರಂ ಪಿರಿದಾಯ್ತು. ಎನ್ನ ವಶಂಗತಳಂ ನೀಂ ನಂಬೆಯಾದೊಡೆ ಆ ಕೃಷ್ಣನ ವಶಂಗತಳಾದ ನಿನ್ನೊಡನೆ ಪವಡಿಸಲ್ ಎನ್ನರಸಿಗೆಂತು ನೇಮಿಪುದು?

ಕೃತ್ರಿಮೆ-(ನಕ್ಕು) ಆನೆಂತಪ್ಪಳಾದೊಡುಂ ನಿಮ್ಮ ಮನೆಯೊಳಿರ್ಪೆಂ, ಅದರಿಂ ನಿನ್ನರಸಿಯುಂ ಏಂಗೆಯ್ವೆಂ?

ಚಂದಂ—ಇದೆಮ್ಮ ಮನೆಯಾದೊಡಂ ನಿನ್ನೊಡನೆ ಪವಡಿಸುವ ಳಿವಳ್ ಮೊದಲ್ ನಿನ್ನನುಜೆಯಾದವಳಲ್ತೆ?

ಕೃತ್ರಿಮಂ—ಅಸಂದೆಗಮೆ ಎನಗವಶ್ಯಂ, ಒಳ್ಳಿತಾಯ್ತು; ಈ ನಿನ್ನ ಸಿರೆ ಎನ್ನೊಡನೆ ಪವಡಿಸಲ್ ಬೇಡಂ, ಕಾಲಗತಿಯಿಂ ಏನಾನುಂ ದೋಷಂ ಬರ ಬಳಿಯಂ ರಾಧೆಗಲ್ತೆ ಪೊರಲಾರದಪವಾದಂ.

ಚಂದಂ—ಹುಂ ಅಪವಾದಮೆಲ್ಲಮಿರ್ಕೆ, ನೀನಿನ್ನಾನುಂ ಆಗಳಾ ನೆಂದ ಮಾತಿನ ಮಚ್ಚರದ ಪಿಡಿಯಂ ಪಿಡಿದು ಈ ನುಡಿಗತ್ತಿಯಿಂ ಎನ್ನಂ ಕುತ್ತದಿರ್, ರಾತ್ರಿಯಂ ಮೀರಿತು.

ಕೃತ್ರಿಮಂ—ಅಕ್ಕೆ, ನಿನ್ನರಸಿಗೇನಾನುಂ ದುರ್ಯೋಚನೆಯಂಕುರಿಸಿದೊಡೆ, ಕಡೆಗೆ ಎನ್ನಂ ಜರೆಯದಿರ್, ಕಿವಿಯಂ ಚಿವುಂಟಿಕೊಳ್, ಪೇಳ್ದಪೆಂ ಎಚ್ಚರಮಿರ್ಕೆ.

ಚಂದಂ—ನಿನಗೇಂ ಮರುಳುಂ ಪಿಡಿಯಿತೆ? ಪೋ ಬಂದುದಂ ಕಾಣ್ಬೆಂ, ನಿದ್ದೆಗೆಟ್ಟೊಡೆ ಎನಗೆ ಪಿತ್ತಮೇರ್ಗುಂ. (ಎಂದು ತಾನೊಂದೆಡೆಗೆ ನಿದ್ರಿಸಲೆಂದು ಪೋದಂ)

ಕೃತ್ರಿಮಂ— ಮನದೊಳ್, ನಿನಗೆ ಪಿತ್ತಮೀಗಳೆ ಏರಿರ್ಕುಂ, ಅಲ್ಲದೊಡೆನ್ನ ಮಾತಿನ ಪೊಲಬನೆ ತಿಳಿಯದೆ ಪೆಂಡತಿಯನೆನಗೊಪ್ಪಿಪೆಯ, ಓ ಬಿದಿಯೆ! ಮಂಕನ ಕೈಗೆ ಮಾಣಿಕಮನಿತ್ತಂತೆವೋಲ್ ಈ ಕುರೂಪಿಗೆ, ರತಿಸುಂದರಿಯನೀಕೆಯಂ ಗಂಟಿಕ್ಕಿದ ನಿನ್ನಂ ಜಡಜಭವನೆಂದು ಬಣ್ಣಿಪ ಕಬ್ಬಿಗನಾಶಯಂ ನಿರರ್ಥಮಾಗದು, (ಎಂದು ಚಂದ್ರಾವಳಿಯೊಡನೆ ಶಯ್ಯಾಗೃಹಮನಲಂಕರಿಸಲೆಂದು ಪೋದಂ)

ಆಃ! ಆ ಸಜ್ಜೆವನೆಯಂ ಬಣ್ಣಿಪುದೆಂತು? ವಾತಾಯನದೊಳೊಳ್ ಪೊಕ್ಕ ತನ್ನ ಕೆಳೆಯನಪ್ಪ ಮಂದಮಾರುತನೊಳ್, ಶ್ರೀಕೃಷ್ಣನ ಮೈಮೆಯನಾರ್ಗುಂ ಬಣ್ಣಿಸಲಸಾಧ್ಯಮೆಂದು ಶಿರಃಕಂಪನದಿಂ ತಿಳಿಸುವಂತೆವೋಲ್ ಪೆಜೊರ್ಡರೊಲೆಯುತಿರ್ದುದು.

ನೀಂ ಮಲಗುವ ಕೋಣೆಯೊಳೆ, ಪೆಂಡತಿಯಂ ಪೆರಂಗೊಪ್ಪಿಸಿದ ನಿನ್ನಿಂಪೆರ್ಚಿನ ಮೂಢರಾರುಮಿಲ್ಲಮೆಂದು, ಚಂದನಂ ಕೂರ್ತು ನಗುವ ನಗುವೆಳ್ಪು ಅಂತರದೊಳ್ ನಿಲಲಾರದೆ ಪೆರಸೂಸುಗುಮೆಂಬಂತೆ ಆ ದೀಪದ ತೇಜಂ ಒಳಯಿಂಕೆ ತುಂಬಿ ಗವಾಕ್ಷಂಗಳೊಳ್ ಮಿನುಮಿನುಂಗುತಿರ್ಕುಂ.

ದುರುಳನುಂ ಕುರೂಪಿಯುಮಪ್ಪ ಚಂದನಂ ಬಿಟ್ಟು, ಕೃಷ್ಣಸ್ಪರ್ಶನದಿಂ ಧನ್ಯನಪ್ಪೆನೆಂದು ಕೆದರ್ದ ಮಲ್ಲಿಕಾ ಮಂದಾರಾದಿ ಕುಸುಮಂಗಳ ನೆವದಿಂ ಆ ಪಾಸಿಗೆ ಸುಮನೋರಾಗಂದಾಳ್ಗುಂ—

ಈ ತೆರದೊಳ್ ಇನ್ನುಂ ಪರಿಪರಿಯಿಂ ಕಬ್ಬಿಗಂಗೆಡೆಗುಡುವ ಶಯ್ಯಾಗೃಹಮಂ ಗೋಪಾಲಂ ರಾಧಾಪ್ರಿಯಂ ಚಂದ್ರಾವಳಿಯೊಡನೊಳವೊಕ್ಕು, ಸಂತಸದಿಂ ಹಂಸತೂಲಿಕಾತಲ್ಪದೊಳ್ ಕೂಂತು ತಂಬುಲಮಂ ಸವಿವಾಗಳ್—

ಚಂದ್ರಾ—ಅಕ್ಕ! ನೀನಿನಿತುಂ ಪೊಳ್ತು ಪೋಗದ ಮಾತುಗಳ ನಾಡಿ ಬರಿದೆ ತಡಂಗೆಯ್ವುದೇಕೆ? (ನಕ್ಕು) ಹುಂ, ನಿನಗೀಗಳ್ ಆ ಪರಿಯೊಳೆ ನುಡಿವ ಅಭ್ಯಾಸಮಿರಲ್‌ಸಾಲ್ಗುಂ.

ಕೃತ್ರಿಮೆ—ಹುಂ, ಅಭ್ಯಾಸಮೆ ಅಕ್ಕೆ—ತಡಂಗೆಯ್ಯದೆ ಸಜ್ಜೆವನೆಗೆ ಬಂದು ಏಂ ಮಾಳ್ಪುದೊ?

ಚಂದ್ರಾ—(ನಕ್ಕು) ಮಾಳ್ಪುದೇಂ? ನಿದ್ರಿಪುದು, ನೀನೇಂ ಕೃಷ್ಣನಿಲ್ಲಿಯುಂ ಇರ್ಪನೆಂದೆಣಿಸಿರ್ಪೆಯೆ?

ಕೃತ್ರಿಮೆ—ನಿನ್ನ ಪರಿಹಾಸ್ಯಮೆಲ್ಲಮಿರ್ಕೆ, ಸರ್ವಾಂತರ್ಯಾಮಿಯಪ್ಪ ಶ್ರೀ ಕೃಷ್ಣಂ ಏನಿಲ್ಲಿ ಇರಲಾರನೆ?

ಚಂದ್ರಾ—ಅಂತಾದೊಡವನಂ ಕಾಣಿಸು, ನೋಳ್ಪೆಂ.

ಕೃತ್ರಿಮೆ—ಮಾಣಿಕಮಂ ಮುಟ್ಟಿದೊಡುಂ ಮಸಿಯಪ್ಪ ನಿರ್ಭಾಗ್ಯರ್ಗೆ ಆ ವೈಮಂ ಇದಿರೊಳಿರ್ದೊಡುಂ ಏಂ ಕಾಣ್ಬನೆ?

ಚಂದ್ರಾ—(ನಸುನಗೆಯಿಂ) ಆಯ್ತು, ಎನಗೆ ಆ ಭಾಗ್ಯಂ ಬೇಡಂ, ಕಿರುವರಯದ ಮೋಪಿನ ಬಾಲಕನೊಡನೆ ವಿಹರಿಪ ನಿನಗೆಯೆ ಇರ್ಕೆ. ನಿನ್ನ ಪುಣ್ಯಮೆ ಸರ್ವೋತ್ತಮಂ.

ಕೃತ್ರಿಮೆ—ನೀಂ ಪೇಳ್ವುದೇಂ! ಅಂತೆಯೆ ಇರ್ಕುಮಲ್ತೆ, ಆದೊಡುಂ ಆ ಶ್ರೀ ಕೃಷ್ಣನಂದಮಂ ಕೇಳ್—ಅವಂ ಬಾಲರ್ಗೆ ಬಾಲಂ, ವೃದ್ಧರ್ಗೆ ವೃದ್ಧಂ, ರಸಿಕೆಯರಪ್ಪ ಪೆಣ್ಗಳ್ಗೆ ಜೌವನಿಗನಾಗಿಯುಂ, ಇನ್ನುಂ ಪಲಂಬರೆಣಿಕೆಗೆ ಪಲವುಂ ಪರಿಯಿಂ ಕಾಣ್ಬಂ.

ಚಂದ್ರಾ—(ಆ ನುಡಿಗೇಳ್ದು ತನ್ನ ವಿರಹಾಂಕುರಕೆ ಮಳೆಗಾಲಂ ತಲೆದೋರ್ದಂತಾದೊಡುಂ, ಗುಟ್ಟಂ ತಿಳಿಸದೆ) ಆ ಕಳ್ಳನನಿನಿತುಂ ಪೊಗಳ್ವುದೆ? ಅಂ ಮೊನ್ನೆ ನಮ್ಮಬ್ಬೆಯ ಮನೆಯಿಂ ಕೆರೆವಿಂಗಿಯುಲೆಂದು ಉಪವನಕ್ಕೈದಿರಲ್, ಅತಿಕ್ರಮಂಗೆಯ್ದು ನಿನ್ನ ಆವ್ಯೈಮನಂ ನೂಂಕಿ ಬಾರದ ಬನ್ನಮಂ ಗೈದೆಂ. ಬಳಿಯುವುವಂ, ಪೆಣ್ಗಳೆಲ್ಲರುಂ ಬೆಂಬತ್ತೆ ಕೈಯೊಳೆ ಜೀವಮಂ ಬಿಗಿವಿಡಿದು ದಾರಿಯೊಳ್ ಪುಲ್ಲುಂ ಮೊಳೆಯದಂತೆ ಪಾರ್ದಂ. (ನಕ್ಕು) ನಿನ್ನ ಸರ್ವಾಂತರ್ಯಾಮಿ, ಎತ್ತೆತ್ತಮೊ ಪಾರ್ದುದು ಎತ್ತೆತ್ತಲುಂ ತಾನಿರ್ಪನೆಂಬುದಂ ತಿಳಿಸಲಲ್ತೆ?

ಕೃತ್ರಿಮೆ—ಸಾಲ್ಗುಂ ನಿನ್ನ ವಿಶೇಷವಾರ್ತೆಗಳ್, ಯತಿಗಳಂತರಕುಂ ಮಿಂಚಿನಂತಿರ್ಪ ಶ್ರೀ ಕೃಷ್ಣಂ ಈ ರಾಧೆಯೊಳ್ ಐಕ್ಯಮಾಗಿರಲ್ ಆ ವೃತ್ತಾಂತಮೇಂ ಪೊಸತೆ? ಎಲ್ಲಮಂ ಈಕೆ ತಿಳಿದಿರ್ಪಳ್ ಎಂದೇ ಭಾವಿಸು.

ಚಂದ್ರಾ—ನೀಂ ತಿಳಿಯಲ್ ಅವಂ ಪೇಳಲ್ವೇಳ್ಕುಂ, ಅಂತಾದೊಡೆಂ ನುಡಿದಂ?

ಕೃತ್ರಿಮೆ—ಕೇಳಾದೊಡೆ, ಆ ಶ್ರೀ ಕೃಷ್ಣಂ ನಿದ್ದೆಯೊಳ್ ಎನ್ನೊಳ್ 'ಎಲೆ ಕಾದಲೆ! ನಿನ್ನ ತಂಗೆಯಂ ಕಂಡರುಂ, ಕೇಳ್ದರುಂ,

ಎಲ್ಲರುಂ ನಾಗಕನ್ನಿಕೆಯೊ? ದೇವ ಸ್ತ್ರೀಯೋ? ಎಂದು ನಾಲಗೆವಂದಂತೆ ಎಂತೆಂತೋ ಪೊಗಳ್ದರ್. ಆಕಟಾ! ಆನುವಮಾವಾತಿಗೆ ಮರುಳಾಗಿ, ಮಾವಂ ಬಿಟ್ಟು ಬೇವಂ ಇಚ್ಛಿಪ ಕೋಗಿಲೆಯೊ ಎಂಬಂತೆವೊಲ್ ಉಪವನದೊಳ್ ಪೆಣ್ಗಡಣದೊಡನಿರ್ಪ ನಿನ್ನ ಚಂದ್ರಾವಳಿಯೆಡೆಗೆ ಪೋಗಿ ಮಾತಾಡಲ್, ಮಾತೋ ಬಿಸಗೆಯ್ಯು, ನೋಟಮೊ ಕಾಟಂ, ರೂಪಮಾದೊಡೆ ಸಾಮಾನ್ಯಮಿರ್ಕುಂ, ಎನ್ನಮನದನ್ನೆಯು ತಂಗೆಯಲ್ತೆ? ಹುಂ, ಇನ್ನವಳಿರ್ದೆಡೆಗೆಯೆ ಸಾಷ್ಟಾಂಗಂ, ಎಂದು ಇಂತೆಲ್ಲಂ ನುಡಿವುತಿರ್ದಂ, ಎಲೆ ಮುಗುದೆ! ಆಂ ಪೂತನೀಭಂಜನಂ ತನಗೆ ಬೆದರ್ದನೆಂದೆಣಿಸಿದ ನಿನ್ನ ಅಜ್ಞಾನಕೇ ನೆಂಬೆನೊ!

ಚಂದ್ರಾ—(ಅಭಿಮಾನಂ ಸವೆಯೆ) ಕೃಷ್ಣನಂತೆಲ್ಲಂ ಪೇಳ್ದುದು ನಿಜಮೆ?

ಕೃತ್ರಿಮೆ—ಹುಂ, ನಿಜಮಲ್ಲಂ, ಪುಸಿಯೆ—ಏನೆನ್ನೊಳಾನಂದಿಸಿದ ಮನದನ್ನಂ ಕನಸಿನೊಳಾದೊಡುಂ ಅನ್ಯಳಂ ಇಚ್ಛಿಪನೆ?

ಚಂದ್ರಾವಳಿ ನಾಣ್ಚಿ ತಲೆವಾಗಿ ಬರಿದೆ ಇರ್ದಳ್.

ಕೃತ್ರಿಮೆ—ಏನೀಗಳ್ ಸೊರ್ಕುಂನುಡಿವೆಟ್ಟಿಗೆಯ ಬಾಯಿ ಮುಚ್ಚಿತೆ?

ಚಂದ್ರಾ—ಹಾಸ್ಯಂಗಳೆಲ್ಲವುಮಿರ್ಕೆ. ಆಂ ನಿನ್ನೊಳೊಂದಂ ನುಡಿಯಲ್ವೇಳ್ಕುಮೆಂದೆಣಿಸಿರ್ಪೆಂ, ನೀನುಂ ಕೇಳ್ವುದನೊದವಿಸುವೆನೆಂದು ಆಣೆಯಿತ್ತೊಡೆ ಪೇಳ್ವೆಂ.

ಕೃತ್ರಿಮೆ—ಪೇಳ್ ಪೇಳ್, ಸಾಧ್ಯಮಾದೊಡದನೊದವಿಪೆಂ, ಎನ್ನ ರಾಧೆಯಾಣೆ.

ಚಂದ್ರಾ—(ಬೆರಗಿಂ) ಇದೇಂ! 'ಎನ್ನ ರಾಧೆಯು ಆಣೆ' ಎಂದೊಡೆ ನೀನೇಂ ರಾಧೆಯಲ್ಲವೆ?

ಕೃತ್ರಿಮೆ—ರಾಧೆಯಪ್ಪ ಎನ್ನ ಆಣೆಯೆಂದರ್ಥಂ, ಅಂತುಮಲ್ಲದೆ ರಾಧಾಕೃಷ್ಣರೊಳ್ ಇನಿಸುಂ ಭೇದವಿಲ್ಲಂ ಅದರಿಂ ಅಂತೆನಲ್ ಕಾರಣ ಮಾಯ್ತು.

ಚಂದ್ರಾ— ಅಂತಾದೊಡೆ ಕೃಷ್ಣನಿನಪ್ಪ ಕಜ್ಜಂ ನಿನ್ನಿಂದಕ್ಕುಮೆ?

ಕೃತ್ರಿಮೆ—ಅದರ್ಕೆ ಸಂದೆಯಮೆ? ಆನೇ ಕೃಷ್ಣಂ, ಕೃಷ್ಣನೇ ಆನೆಂದೆಣಿಸಲಕ್ಕುಂ.

ಚಂದ್ರಾ—ಆಯ್ತು. ಆದೊಡೆ ಕೃಷ್ಣನ ರೂಪಮಂ ತಾಳ್.

ಕೃತ್ರಿಮೆ—ಕೃಷ್ಣನ ಆಕಾರಂ ನಿನಗೇಕೆ? ಆವೈಮುನಂನೋಳ್ಪ ಭಾಗ್ಯಮೆನಗನಾವಶ್ಯಕಂ, ಎಂದು ಹಾಸ್ಯಂಗೆಯ್ದುಯಲ್ತೆ. ಅಂತುಮಲ್ಲದೆ ಅವಂ ಜಾರಂ, ಕಳ್ಳಂ, ಪಲವೇಂ? ದುರ್ಗುಣಂಗಳ್ಗೆ ತಾಯ್ವನೆಯೆನಿಪ್ಪ ನಲ್ಲವೆ?

ಚಂದ್ರಾ—ಇಂತೆಲ್ಲಂ ಆರೆಂದರೊ! ಅದೆಲ್ಲಮಿರ್ಕೆ, ನೀನಾಣೆ ಗೊಟ್ಟುಂ ತಪ್ಪಿದಪೆಯೆ? ಪೆರತೇಂ ಪೇಳ್ವುದು? ಆ ಕೊಳಲ್ಗೈಯನಂ ತೋರ್ದೊಡೆ ಒಂದಾಸೆ ಪೂರ್ತಿಯಕ್ಕುಂ.

ಕೃತ್ರಿಮೆ—ಆಃ ಈ ನುಡಿ, ಬೇಸಗೆಯ ಕಾರ್ಮುಗಿಲೊಡ್ಡು, ಏನಾ ಕಳ್ಳಂ ಹದಿಬದೆಯಪ್ಪ ನಿನ್ನ ಮನಮನುಂ ಕಳ್ದನೆ? ಆನರಿವೆಂ ಅವಂ ಬಿಡಂ, ಅಂತುಂ ಬಿಟ್ಟೊಡುಂ, ಮೆಲ್ನಡೆಯುಂ, ನಗುಮೊಗಮುಂ, ಮೋಣೇಂ, ಸವಿಗೊಳಲುಂ, ಎಂತುಂ ಬಿಡದು.

ಚಂದ್ರಾ—ಆನೆಂದುದರ್ಕೆ ಉತ್ತರಮಿಂತೊ?

ಕೃತ್ರಿಮೆ—ಆನಿಲ್ಲಿರ್ಪೆಂ, ಶ್ರೀಕೃಷ್ಣಂ ಗೋಕುಲದೊಳಿರ್ಪಂ. ಅವ ನಂ ತೋರಲ್ವೇಳ್ಕುಮೆಂದೊಡೆ ನಿನಗೇಂಪುರ್ಚೆ? ನಡೆದ ದಣಿವುಂ ಪಿರಿ

ರ್ಕುರ್ಣಂ, ಅದರಿಂ ನಿದ್ರಿಪೆನಿದೇ ಉತ್ತರಂ (ಎಂದು ಆಕೆಯ ತೊಡೆಯೊಳ್ ತಲೆಯಿಟ್ಟು ಪವಡಿಸಿದಳ್)

ಒಡನಾಚಂದ್ರಾವಳಿ—(ಎಂತಾನುಂ ತೋರದೊಡೆ ಬಿಡೆನೆಂದು ಅವಳಂ ಪಿಡಿದು ಸೆಳೆದು ಎಬ್ಬಿಸಿ ಅಚ್ಚರಿಯಂ ತಾಳ್ದು,) ಓ ಎನ್ನಕ್ಕ! ಇದೇಂ ನಿನ್ನ ಮೆದುಮೈ ಈಗಳ್ ಪುರುಷರ ಮೆಯ್ಯಂತೆ ಕಲ್ಗೆ ಪಾಸಾಟಿಯಾಗಿರ್ಕುರ್ಣಂ?

ಕೃ ತ್ರಿ ಮೆ—ಆಂ ಪೇಳ್ದೆನಲ್ತೆ ಶ್ರೀ ಕೃಷ್ಣಂಗುಮೆನಗುಂ ಇನಿತುಂ ಭೇದಮಿಲ್ಲೆಂದು, ಅದರಿಂ ಈಗಳ್ ಗಂಡುಮೆಯ್ಯಾಗಿರ್ಕುರ್ಣಂ.

ಚಂ ದ್ರಾ—ನಿನ್ನ ಪುಣ್ಯಮನೇನೆಂಬೆಂ! ಆನಾದೊಡೆ "ಅಂಗೈಯೊಳ್ ಬಂದ ಪಾಲಂ ಮುಂಗೈಯ್ಯೊಳ್ ನೂಂಕಿದಂತೆ" ತಾನಾಗಿ ಬಂದ ಆ ಮೈಮನಂ, ಎನ್ನ ದುರದೃಷ್ಟದಿನುಂ ಪಲವುಂ ಪೆಣ್ಗಳಿರ್ಪರೆಂಬ ಲಜ್ಜೆಯಿನುಂ, ಅತಿಗಳೆದೆಂ; ಅದನಿನ್ನೆಂದು ಫಲಮೇಂ? "ಕಡಿದ ನೀರ್ ಕಟ್ಟೆಕೆ ಬರ್ಪುದೆ?" ಪಲವೇಕೆ? ಎನ್ನೊಳ್ ನಿನಗಾಸೆಯಿರ್ದೊಡೆ ಆ ತಾವರೆಗಣ್ಣ ಮನದಿನಿಯನಂ ತೋರ (ಎಂದು ಕಾಲ್ಪಿಡಿದಳ್).

ಒಡನಾಚರಣದೊಳ್ ಕಮಲವಜ್ರರೇಖೆಗಳಂ ಕಂಡು ಭ್ರಮೆಗೊಂಡು ಮೇಲೆ ನೋಳ್ಪುದುಂ, ಸುಲಿಪಲ್ಲ, ಕಿರುನಗೆಯ, ತಾವರೆಮೊಗದ, ನಿಡುಪುರ್ಬಿನ, ಮರಕತಮಣಿ ಮಾಲೆಯ, ನವಮೋಹನಾಂಗನಂ, ಭಕ್ತಜನಾಭೀಷ್ಟದಾಯಕನಂ, ಶ್ರೀ ಕೃಷ್ಣನಂ, ಕಂಡಳ್. ಆ ಸಮಯದೊಳ್ ಚಂದ್ರಾವಳಿಯ ಮನಮೆಂತಿರ್ಪುದೆಂದು ಬಣ್ಣಿಸಲ್ ಫಣಿಕಲ್ಲದೆ ನಾಲಗೆಗರಿಯದು. ಒಡನೆ ಲಜ್ಜೆಯಿಂ ಕಣ್ಮುಚ್ಚಿ ಅರೆನಿಮಿಷದೊಳ್ ಅರೆಗಣ್ಣೊಳ್ ಈಕ್ಷಿಪುದುಂ, ರಾಧೆಯ ರೂಪಮೆ ಗೋಚರಿಸೆ. (ಬೆರಗಿಂ) ಎಲೆಲೆ ಅಕ್ಕ! ನೀನೀಗಳ್ ಕಣ್ಗಟ್ಟಿನ ಮಾಯೆಯುಂ ಕಲ್ತಿರ್ಪೆ. ನಿನಗೇನೆನ್ನಂ ತಂಗೆಯಂ

ಹಿಂಸೆಗೆಯ್ಯಲ್ವೇಳ್ಕುಮೆಂಬ ವ್ರತಮೆ? ಎಂಬುದುಂ,-ಬಳಿಯಂ ಪಲವುಂ ಬಾರಿಯೊಳ್ ಕೃಷ್ಣನ ರೂಪಂ ತೋರಿ, ಇಂದ್ರಜಾಲಮೆಂಬಂತೆ ಅಡಂಗೆ—

ಚಂದ್ರಾ—(ಕೃಷ್ಣನೆಂದೇ ಬಗೆದು) ಓ ಎಣಿಕೆಗುವುಳವಲ್ಲದ ಅಚಿಂತ್ಯಮೂರ್ತಿಯೆ? ಎನ್ನೀ ಮನದನುತಾಪಮಂ ತಿಳಿದೊಡೆ ಕಲ್ಲಾದೊಡುಂ ಕರಗುಗುಂ. ಅಂತಿರಲ್ ಕರುಣಾಂಬುಧಿಯೆಂದು ನೆಗಳ್ತೆವಡೆದ ನೀನೇ ಈ ಪರಿಯಿಂ ಬನ್ನಂಬಡಿಪುದೆ! ಮೊದಲ ತಪ್ಪಂ ಅಬಲೆಯೊಳಿಡದಿರೆಂದು ಎನಿತುಂ ಬಾರಿ ಕಾಲ್ವಿಡಿಯಲ್ವೇಳ್ಕುಂ? ಪೆರ್ಚೇಂ? ಪಣ್ಣುಂ ಕತ್ತಿಯುಂ ನಿನ್ನ ಬಸಂ. ಇದೋ ಮನಂಬಂದಂತೆ ಮಾಡು (ಎಂದೆರಳ್ಕೈಗಳಿನುಂ ಕಾಲ್ಗಳಂ ಬಿಗಿವಿಡಿದಳಂ ತೆಗೆದೆತ್ತಿ—

ಶ್ರೀ ಕೃಷ್ಣಂ—(ನಾಣಿಂ ಬಾಗಿದ ಮೊಗಮನುಮೆತ್ತಿ) ಓ ಮನಃಪ್ರಿಯೆ! ಮತ್ತೇನುಮಿಲ್ಲಂ, ನಿನಗೆ ಮೊಗಮಂ ತೋರಲ್ಕೇ ಭಯಮಪ್ಪುದು—

ಚಂದ್ರಾ—(ಅಡಿಮೊಗದಿಂ) ಅದೇಂ ಆಂ ಪೂತನ್ಯಾದಿಗಳಂ ಕೊಂದ ಭಯಂಕರಿಯೆ?

ಕೃಷ್ಣಂ—ನಕ್ಕು ಪೂತನ್ಯಾದಿಗಳಂ ಕೊಂದ ಭಯಂಕರಂಗುಂ ಎಂತೆಂತೋ ಬನ್ನಂಗೊಳಿಸಿ ಭಯಂಕರಿಯಾದೆಯಲ್ತೆ? ಅದರಿನೆನ್ನಂ ಬಿಡು-

ಚಂದ್ರಾ—(ಕಾತರತೆಯಿಂ) ಆಂ ಪೆಣ್ಣಾದೊಡುಂ ಲಜ್ಜೆಯುಂ ಬಿಟ್ಟು ನಿನ್ನಂಕಾಲ್ವಿಡಿದಿರ್ಪೆನೆಂಬ ಗರ್ವದಿನೋ, ಇಂತೆಲ್ಲಂ ನುಡಿವುದು?

ಕೃಷ್ಣಂ—ನಿನಗೆ ಮಾತ್ರಂ ಲಜ್ಜೆ, ಆನೇಂ ನಾಣಿಲ್ಲದ ಜಡನೆ? ಪಲವುಂ ಪೆಣ್ಗಳ ಇದಿರೊಳೆ ಎನ್ನಂ ಪರಿಪರಿಯಿಂ ಭಂಗಿಸಿದುದಂ ಮರೆತೆಯೆ?

ಚಂದ್ರಾ—ಓವೋ! ಅದಿತೆಂ ನೀನನಿತುಂ ಮಾನಿಯಾದೊಡೆ ಅನಿಬರಿದಿರೊಳೆನ್ನಂಗಕೆ ಕೈಯಿಕ್ಕಲಕ್ಕುಮೆ?

ಕೃಷ್ಣಂ—ಆಯ್ತು, ಅನಪರಾಧಿ; ಇನ್ನೆನಗೆ ನಿನ್ನ ತೊಡಂಕೇ ಬೇಡಂ.

ಚಂದ್ರಾ—(ನಸುನಕ್ಕು) ಅಪರಾಧಿಯಾದುದರಿಂ ಇನ್ನಾಂ ಪೇಳ್ದಂತೆಯೆ ನಡೆಯಲ್ವೇಳ್ಕುಂ, ಈಗಳ್ ನಿನ್ನಂ ಬಿಡುವೆನೆಂದೆಣಿಸಿರ್ಪೆಯ? ಹುಂ ಅಕ್ಕಕ್ಕುಂ-ಮಾಡಿದುದಂ ತಿನಲ್ವೇಳ್ಕುಂ.

ಕೃಷ್ಣಂ—ಸಾಲ್ಗುಂ ಸಾಲ್ಗುಂ ನಿನ್ನ ಬೆಡಂಗುಗಳ್, ಆಂ ಪೂರ್ವಾವಸ್ಥೆಯುಂ ತಳೆವೆಂ.

ಚಂದ್ರಾ—(ಆ ನುಡಿಗೇಳ್ದು, ಮೇಲ್ನೋಡೆ, ಮುಗುಳ್ನಗೆಯಿನಿತುಮಿಲ್ಲದ ಶ್ರೀಕೃಷ್ಣನ ಮೊಗಂ, ತನ್ನಂ ಬಿಟ್ಟಪನೋ ಎಂಬ ಸಂದೆಗಮಂ ಮಾಡೆ, ಭೀತಿಯಿಂ ಕಣ್ಣೀರ್ ಸುರಿಯೆ, ಕೃಷ್ಣನಂ ಬಿಗಿವಿಡಿದು.)

"ಎಲೆ ಮನದನ್ನ! ಸರ್ವಜ್ಞನಾಗಿಯುಂ ನಂಬಿರ್ದಳಂ ಅಬಲೆಯುಂ ಇಂತೆಲ್ಲಂ ಕರಗಿಪುದೊಪ್ಪಿತಮೆ? ಎಂತುಂ ಎನ್ನಂ ಬಿಟ್ಟು, ನೀಂ ಪೂರ್ವಾವಸ್ಥೆಯಂ ಪೊರ್ದುವೆಯಾದೊಡೆ, ಎನಗಂತ್ಯಾವಸ್ಥೆಯುಂ ಕೈಗೊಳಿಸು."

ಎಂದು ಗದ್ಗದಸ್ವರದಿಂ ಕೇಳಿಸಿ ತಲೆಯುಂ ಬಾಗಿಸಿದಳ್. ತಡೆತಡೆದಾಡುವ ನಿಡುಸುಯ್ಲೊಂದುಕೇಳುತಿರ್ದುದು; ಆಗಳ್ ಶ್ರೀಕಾಂತನ ಮನಮುಂ ತೆಳ್ತುದು.

ಭಾರತಿ—ಎನ್ನರಸ! ಏನಾಕೃಷ್ಣನ ಕಲ್ಮನಮುಂ ನೀರಾಯ್ತೆ? ಅಬ್ಬಾ! ಪುರುಷರ ಮನಂ ಪರುಷಮೆನಲ್ಕೆ, ಪುರುಷೋತ್ತಮನ ಮನಂ ಪರುಷೋತ್ತಮಮೆಂದೊಡೇಂ ಪಿರಿದೆ?

ಕಬ್ಬಿಗಂ—(ನಸುಮುನಿಸಂ ನಟಿಸಿ) ನೀಂ ಕತೆಯುಂ ಕೇಳ್ವೆಳಲ್ಲಂ; ಎಂತಾನುಂ ಗಂಡರ್ ದುಟ್ಟರ್ ಪೆಣ್ಗಳ್ ಒಳ್ಳಿದರ್, ಎಂಬ ಸಿದ್ಧಾಂತಮಾಗಲ್ವೇಳ್ಕುಮಲ್ತೆ?

ಭಾರತಿ—ಕೋಪಿಸದಿರ್, ಪುರುಷರ್ ದುಟ್ಟರೆಂಬ ಎಣಿಕೆಯಿಂ

ಘೊರೆದುದಲ್ಲಂ. ಚಂದ್ರಾವಳಿಯ ಮರುಕಮಂ ಯೋಚಿಸಿ ಪಿಂಮುಂದರಿಯದೆ ನುಡಿದೆಂ "ಕೈಯಿಂ ಬೀೞ್ವುದಂ ಪೆರ್ಕಿದೊಡುಂ ಬಾಯಿಂ ಬೀೞ್ವುದಂ ಪೆರ್ಕಲರಿದು" ಎಂಬ ಪಿರಿಯರ ಮಾತಂ ಮರೆತೆಂ; ಪೆಣ್ಣಿನ ತಪ್ಪನೊರ್ಮೆಗೆ ಸೈರಿಸು.

ಕಬ್ಬಿಗಂ—ಎಂತಾನುಮಿರ್ಕೆ, ಕೇೞ್ವೆಯಾದೊಡೆ ಆ ನಾಲಗೆಗೆ ಇನಿಸುಂ ಬುದ್ಧಿವೇೞ್.

ಭಾರತಿ—(ನಕ್ಕು) ಆಯ್ತು, ಮುನಿಸಿಡದೆ ಪೇೞ್.

ಕಬ್ಬಿಗರಣ್ಣಂ—ಕೇೞ್, ಬಳಿಯಂ ಶ್ರೀಕೃಷ್ಣಂ (ಎಡೆವಿಡದೆ ಅೞುವಳಂ ನೋಡಿ ನಸುನಗುತೆ,) 'ಓ ಮುಗುದೆ! ಇದೇನೊಂದು ಪೊಸಪರಿಯಗಾನಮೆ?' ನಿನ್ನೊಡನಿನ್ನು ಇಂತೆಲ್ಲಂ ಸರಸದ ಮಾತುಗಳನುಂ ಆಡಲ್ಕೆ ಉಪಾಯಮಿಲ್ಲಮೆಂದಾಯ್ತು; ಇಸ್ಸಿ, ಪಳ್ಳಿಯ ಪೆಣ್ಗಳ ಪೆಸರಂ ಪೇೞಿಪೆಯೆ?' ಎಂದಾಕೆಯ ಕಣ್ಣೀರನೊರಸಿ ಬೇರೆ ಸವಿನುಡಿಗಳನೆತ್ತಿ ಸಂತಯಿಸಿದಂ.

ಬಳಿಯಂ ಇದೋ ಇರುಳುಂ ಮೀರಿತು, ಎಂದುಸಿರ್ದಂ, ಇನ್ನುಂ ಅವರ್ ಏಂ ನುಡಿದರ್, ಏಂ ಗೆಯ್ದರ್, ಎಂಬುದನೊರೆಯಲ್ ಎನ್ನ ನಾಲಗೆ ತಿರುಗದೆ ಕಟ್ಟಂಬಡೆದಂತೆ ಇರ್ಕುಂ.

ಭಾರತಿ—(ನಸುನಕ್ಕು) ಏನಂತೆ ನಾಲಗೆವಾರದ ಒಂದು ರೋಗಮೆ?

ಅಣ್ಣಂ—(ನಕ್ಕು) ಆನಿಂತೆಲ್ಲಂ ಮಾತಾಡುತಿರಲ್, ಅದಂ ನುಡಿವುದರ್ಕೆ ಮಾತ್ರಂ ರೋಗದ ಕಾಟಮೆ? ಕಾಂತಾಸಮಾಗಮುಮಂ ಬಣ್ಣಿಸಿ, ಬಂಡೆಸಗಿ ಲಜ್ಜಾಸ್ಪದಂಗೆಯ್ಯದಿರೆಂದು ವಾಗ್ದೇವತೆಯೆ ಮಾಡಿದ ನೇಮಂ.

ಭಾರತಿ—ಅಂತಾದೊಡೆ ಬಣ್ಣಿಸಿದ ಮೊದಲ ಕಬ್ಬಿಗರ್ಗೆ ಏಂ ವಾಣಿಯ ಆತಂಕಮಿಲ್ಲಮೆ?

ಕಬ್ಬಿಗಂ—"ಸರ್ವಾಧಾರಃ ಕಾಲಃ" ಎಂಬುದರಿಂ, ಆ ಕಾಲದೊಳ ವರ್ಗೆ ಭಾರತೀದೇವಿಯ ಆತಂಕಮಿರ್ದುದೊ, ಇಲ್ಲವೊ, ಎಂಬುದನರಿಯು ಲಸಾಧ್ಯಂ; ಅದಿರ್ಕೆ, "ಪುರಾಣಮಿತ್ಯೇವ ನಸಾಧು ಸರ್ವಂ" ಎಂಬೊಂದು ವಚನದಿನೇ ಪೂರ್ವಮಾರ್ಗಮೆಂದು ಸರ್ವಮುಂ ಗ್ರಾಹ್ಯಮಲ್ಲಮೆಂದಾಯ್ತು. ಹುಂ ಸಕ್ಕದದ ನುಡಿಪೋಕೆ, "ಅಪ್ಪಂ ತೋಡಿದ ಬಾವಿಯೆಂದು ಸೌಳ್ನೀರಂ ಕುಡಿವುದೆ?" ಎಂಬುದು ಸರ್ವಸಾಮಾನ್ಯಮಲ್ತೆ? ಅಂತುಮಲ್ಲದೆ ಪಿರಿಯರ ಮತಮುಂ ದೇಶಕಾಲಾನುಸಾರಮಾಗಿ ನಡೆಯಲ್ವೇಳ್ಕುಮೆಂಬುದೇ.

ಭಾರತಿ—ಎನ್ನರಸ! ಈ ನುಡಿಯೇ ಅತಿರಸಮಲ್ಲದೆ, ಬೇರಾವುದುಮಲ್ಲಂ, ಬಲ್ಸಂತಸಮಾಯ್ತು; ಆದೊಡೆ ನಿನ್ನ ಮಾತಿದು ನಡುವಗಲಂ ಪಡುವಿರುಳೆಂಬ ಅನಾಗರಿಕರ ಕಿವಿಗೆ ಬೀಳ್ದೊಡೆ, ಬಾಯೊಳ್ ಮಾತ್ರಮಲ್ಲಂ, ಕೈಯೊಳುಂ ಮುಂದೆವರ್ಪರ್. ನಾಯಬಾಲಂ ನಳಿಗೆಯೊಳೊರ್ಮೆಗೆ ಸಮಮಕ್ಕುಂ, ಮೂಢ ಹೃದಯಂ ಒರ್ಮೆಯುಮಾಗದು. ಹುಂ, ಅದಂತಿರ್ಕೆ, ಮತ್ತೇನಾಯ್ತು?

ಕಬ್ಬಿಗರನ್ನಂ—ಕೇಳೆನ್ನ ಮನದನ್ನೆ! ಬಳಿಯಮಿನಿಸುಂ ಪೋಳ್ತುಂ ಕಳೆಯೆ, 'ನಿನ್ನಂ ಮೆಯ್ಮರೆಯಿಸಿ ನೆರೆದವಂ ಅದಾರ್? ಅದಾರ್? ಅದಾರ್?' ಎಂದು ಚಂದ್ರಾವಳಿಯುಂ ಕೂರ್ತು ಚಂದನ ಪ್ರಶ್ನಮೆನೆ *"ಕೊ ಕೋ ಕೋ" ಎಂಬ ಕೋಳಿಸೊರಮುಂ ಕೇಳಿತು. ಒಡನೆ, ಆನಂದಾಂಕುರಕೆ ಬಿಸಿನೀರಂ ಪೊಯ್ದಂತಾಗೆ

ಚಂದ್ರಾ—ಓ ಮನದಿನಿಯ! ಈಕೆಟ್ಟ ಕೋಳಿಗುಮಿನಿತುಂ ಪಗೆಯಾಯ್ತೆ?

ಕೃಷ್ಣಂ—(ನಸುನಕ್ಕು,) ಅದೇನಚ್ಚರಿಯೆ? ತನ್ನರಸನಂ ಬಿಟ್ಟು, ಪೆರನೊಳ್ ಮನವಿಟ್ಟ ದುರ್ವೃತ್ತಿಯ ಪೆಣ್ಗಳ್, ಲೋಕಕೇ ಪಗೆ.

---

*ಕಃ = ಆರು,

ಚಂದ್ರಾ—ಇದೇತರಮಾತು? ಅಂತುಂ ಪಗೆಯಿಡುವೊಡೆ ಕುರೂಪಿಯುಂ, ವಿದ್ಯಾವಿಹೀನನುಂ, ಅರಸಿಕರೊಡೆಯನುಂ, ಕಡುದುರುಳನುಮಪ್ಪಂಗೆ ಎನ್ನನಿತ್ತ ತಾಯ್ತುಂದೆವಿರೊಳ್ ತಕ್ಕುದಲ್ಲದೆ "ಗಾಯವೊಂದೆಡೆ ಮದ್ದೊಂದೆಡೆ" ಎಂಬವೊಲ್ ಏನೆನ್ನೊಳೆಯೆ?

ಕೃಷ್ಣಂ—ಓ ಒಳ್ನುಡಿಯಂ ಪೇಳ್ದೆ, ಸಂತೋಷಮಾಯ್ತು; ಆದೊಡೆ ಕೋಳಿಯದು ಪಗೆಯಿಂ ಕೂಗಿದುದಲ್ಲಂ; ಮೇಣ್ ಏಕೆಂದೊಡೆ, ಇದೋ ಈ ಚಣದೊಳೆ ಉದಯಮಕ್ಕುಂ, ಅದರಿಂ ತಕ್ಕುದಂ ಯೋಚಿಸು, ಇಲ್ಲದೊಡೆ ಗಂಡನ ಕಠಿನಾಜ್ಞೆಗೊಳಗಪ್ಪೆಯೆಂಬುದಂ ಸೂಚಿಸಲ್ಕೆಯೆ.

ಚಂದ್ರಾ—ಅಂತಾದೊಡೆ ಈಗಳ್ ಗತಿಯದೇಂ?

ಕೃಷ್ಣಂ—(ನಕ್ಕು,) ಬೇರೇಂ? ಎನಗೆ ಪೆಣ್ಮೆಯ್ಯೇ ಗತಿ.

ಚಂದ್ರಾ—ಪೇಳಲ್ ನಾಣ್ಚಿ, ಅದಾಗದಾಗದೆಂದು ಅತ್ತಿತ್ತಂ ತಲೆಯಾಡಿಸಿ ಸೂಚಿಸಿದಳ್.

ಕೃಷ್ಣಂ—(ಮುಗುಳ್ನಗೆಯಿಂ,) ಇದೇನೀಗಳ್ ಮೂಕವ್ಯಾಧಿ ನಿನಗೆಯೆ ಪ್ರಾರಂಭಿಸಿತೆ? ಅಭಿನಯಂಗಳ್ ಸಾಲ್ಗುಂ, ಬಾಯ್ಬಿಟ್ಟು ಪೇಳ್.

ಚಂದ್ರಾ—ಪೇಳ್ವುದೇಂ? ನೀನೀಗಳೆ ಪೂರ್ವರೂಪಮಂ ಪೊಂದಿದೊಡೆ 'ರಾಗಂ ಬರ್ಪಾಗಳ್ ತಂತಿ ಕಡಿದುದು' (ಎಂದು ಲಜ್ಜೆಯಿನಡ್ಡಂ ನೋಡುತಿರ್ದಳ್.)

ಕೃಷ್ಣಂ—ಈ ನುಡಿಯಿಂ ಅಭಿನಯಮೋ ಒಳ್ಳಿತಿರ್ದುದು, ಮೂಲಾಪೇಕ್ಷೆಯಿಂ ಟಿಪ್ಪಣಿಯೇ ಕಠಿನಮಾಯ್ತು; ಆವರಾಗಂ ಬಂದುದೊ? ಆವ ತಂತಿ ಕಡಿದುದೊ? ಅಕಟಾ "ಪೆಣ್ಗಳ ತಳ್ಳಿ ಕೊರಲ್ಗೆ ಬಳ್ಳಿ" ಎಂಬುದನರಿತೊಡುಂ ಅಜ್ಞಾನಮೆನಗೆ ಬಸಿರ್ಗಿಲ್ಲದ ಕೂಳಾಯ್ತು.

ಚಂದ್ರಾ—ಈ ಯೋಚನೆ, ಮೊದಲೇ ಪುಟ್ಟಿದೊಡೆ ಒಳ್ಳಿತಿರ್ದುದು, ಉಂಡ ಮೇಲೆ ಜಾತಿಯಂ ಕೇಳ್ವುದು" ಎಂಬವೊಲ್ ಇನ್ನೇಂ ಫಲಂ?

ಕೃಷ್ಣಂ—ಹಾ! "ಗುಟ್ಟಂ ಬಿಟ್ಟಂ ಕೆಟ್ಟಂ" ಎಂದು ನಾಣ್ಣುಡಿ, ಸಾರುತಿರ್ದೊಡಂ, ಗುಟ್ಟನಿತ್ತು, ಈಕೆಯ ಕಡೆಗಣ್ಣಿಕೆಗೀಡಾದೆನೆ!" ಹುಂ ಇರ್ಕೆ, ಇನ್ನುಂ ತಡಂ ಗೆಯ್ವುದುಚಿತಮಲ್ಲವೆಂದು ತನ್ನ ಚಕ್ರ ಮಂ ಸೂರ್ಯಂಗೆ ಅಡ್ಡಂ ತಿರುಗುವಂತೆ ನೇಮಿಸಿದಂ—ಬಳಿಯಂ ಐದುಂ ದಿನಂ ಗಾಢಾಂಧಕಾರಂ ಮುತ್ತಿರ್ದುದು; ಅಂತಿರೆ, ಕಾಲದೊಳ್ ಏಳ್ದಂ ಬೆಳಗಿನ ಲಚ್ಚಣಮಂ ಕಾಣದೆ, ಅಂಗಳಕಿಳಿದು ಮೂಡಲದೆಸೆಯಂ ನೋಡುತಿರ್ದರ್ ಕೆಲಂಬರ್—ಇನ್ನುಂ ಇರುಳ್ ಪೆರ್ಚಿರ್ಪುದು, ಎಂದು ಪವಡಿಸುವರ್ ಪಲಂಬರ್—ಈಗಳೆ ಬೆಳಕುಂ ಪರಿಗುಂ, ಅದರಿಂ, ಅನ್ನೆ ವರಂ, ವೇದಾಧ್ಯಯನಂಗೆಯ್ವೆವು, ಎಂದು ಅಂತೆ ಮಾಳ್ಪರ್ ಅರೆ ಬರ್-ಇನ್ನುಂ ಪೊಳ್ತುಂ ಪೋಗೆ, ಮಕ್ಕಳ್ಗೆ ಪಸಿವೆ, ಪೆಣ್ಗಳ್ಗೆ ಆಲಸ್ಯಂ; ಪುರುಷರ್ಗೆ ಅಂಗಳದೊಳ್ ಅತ್ತಿತ್ತಂ ನಡೆವ ಬೆಸನಂ; ಇಂತೊಂದಚ್ಚರಿಯ ಪೊಸಪರಿಯಾಗೆ, ಐದನೆಯ ಪಗಲೊಳುಂ ರವಿಯಸ್ತಂಗತನಾಗಲ್, ಎಂದಿನಂತೆ ಕೃಷ್ಣಂ ಚಕ್ರಮಂ ತೆಗೆಯೆ, ಚಂದ್ರಾವಳೀ ಕೃಷ್ಣರ್ಗೆ, ಆ ರಾತ್ರಿಯುಂ ಕಣ್ಣೊಳೆ ಬೆಳಗಾಯ್ತು. ಬಳಿಯಂ ಶ್ರೀ ಕೃಷ್ಣಂ ಲೋಕೋಪದ್ರವಂ ತಕ್ಕುದಲ್ಲೆಂದು, ಚಂದ್ರಾವಳಿಯಂ ಎಂತಾನುಂ ಸಂತಯಿಸಿ ರಾಧೆಯ ರೂಪಮನೆ ತಳೆದು, ಮರುದಿನಂ ಸುಮುಖಿಯೊಳಾಜ್ಞೆಯಂ ಕೊಂಡು, (ನಸುನಕ್ಕು,) "ಎಲೆ ಚಂದ! ಇದೆಕೊಳ್ ನಿನ್ನ ಪೆಂಡತಿ ನಿನ್ನ ಬಸಂ ಇನ್ನಾಂಪೋಪೆಂ" ಎಂದು ಪೊರಟ್ಟೈದಿದಂ.

ಎಂಬಲ್ಲಿಗೆ ಚಂದ್ರಾವಳಿ ವಿಲಾಸದೊಳ್ ತೃತೀಯಾಶ್ವಾಸಂ.

---

ಅನ್ನೆಗಮಿತ್ತಂ ಆ ಕಲಹಾಪ್ತಂ ನಾರದಂ ಈ ಬಿಸಯಮಂ ತಿಳಿದು ಗಾಳಿಗೆ ಪರಿಮಳಮೊದವಿದಂತಾಗೆ, ಮನೋವೇಗದಿಂ ಗೋಕುಲದ ನಂದಗೋಪನ ಮನೆಗೆ ಬಂದಂ. ಅಂತೆ ಬಂದಾ ನಾರದನಂ ಕಂಡಾನಂದಂ

ಏನೋ ಕಡೆಗುಡಿಗಳಂ ಪೊತ್ತಿಸಲ್ ಬಂದಿರ್ಪನೆಂದೆಣಿಸಿ ಇದಿರ್ವೈದಿ ಕಾಲ್ಗೆರಗಿ ಕರತಂದು ಗದ್ದುಗೆಯನೇರಿಸಿ ಸತ್ಕಾರಂಗೆಯ್ವುದುಂ.

ನಾರದಂ — ಓ, ನಂದ, ನಿನ್ನಮನ್ನಣೆಗಳ್ಗೆ ಆಂ ಮೆಚ್ಚಿದೆಂ, ಹರಿಸಮಾಯ್ತು; ಏಂ ಊರೊಳೆತ್ತಲುಂ ಕುಶಲಮೆ? ಅಂತುಮಲ್ಲದೆ ಕೃಷ್ಣನ ಮಕ್ಕಳಾಟಿಕೆ, ಗಡುವಂ ದಾಂಟದೆ ಒಂದು ನೆಲೆಯೊಳ್ ಈಗಳಾದೊಡುಂ ನಿಂತಿರ್ಕುಮೆ?

ನಂದಂ — ಮೌನೀಶ್ವರನೆ, ನಿನ್ನ ಕರುಣಾಮೃತಧಾರಾಸೇಚನದಿಂ ಊರೊಳೆಲ್ಲಂ ಕಲ್ಯಾಣಮೆ. ಕೃಷ್ಣಂಗಾದೊಡೆ ಜೀವರತ್ನಮೆಂಬಂತೆವೊಲ್ ರಾಧೆಯೆಂಬೊರ್ವಳ್ ಒದವಿರ್ಪಳ್; ಈಗಳವನ ಮೆಯ್ಯೇ ಆಕೆಯ ಬಸಮಿರ್ಕುಂ, ಅದರಿಂ, ಊರೂರಂ ತಿರುಗಿ, ಮನೆಮನೆಗಳಂ ಪೊಕ್ಕು, ಎನಗೆ ಪೆಸರಂತರ್ಪ ತೊಡಂಕೊಂದಿಲ್ಲಂ, ಆ ಕಾರಣದಿನಾನುಂ, ಎಂತಾನುಮಕ್ಕೆ, ಎಂದು ಬರಿದೆ ಇರ್ಪೆಂ.

ನಾರದಂ—ಆ ನುಡಿಯಂ ಕೇಳ್ದು ಒಡನೆಯೆ ಗಹಗಹಿಸಿ ನಕ್ಕು ಎಂತುಂ ಸೈಸದೆ ಮತ್ತಮುಂ ನಗುತಿರ್ದಂ.

ನಂದಂ — ಕೇಳ್ಮೆ ವಿರಿಂಚಾತ್ಮಜ, ಶಿಷ್ಯನನೆನ್ನಂ, ಈಪರಿಯಿಂ ಪರಿಹಾಸ್ಯಂ ಗೆಯ್ವುದೆ? ಎನ್ನೊಳ್, ಏನಾನುಂ ಕುಂದಿರ್ದೊಡೆ ಬಿರ್ಚಿ ಪೇಳಿ ಅದಂ ನಿವಾರಿಪುದು ನಿನ್ನಂತಿರ್ಪಗುರುಗಳ ಕರ್ತವ್ಯಮಲ್ತೆ?

ನಾರದಂ — ಎಲೆನಂದ, ಪೇಳಲೆಂದೇ ಬಂದೆಂ, ಆದೊಡೆ ಕುರುಡಂ, ಆನೆಯಂ ಬಣ್ಣಿಸಿದಂತೆ ನೀಂ ಕೃಷ್ಣನ ಈಗಳಿನ ಅವಸ್ಥೆಯಂ ಪೇಳ್ದುದರ್ಕೆ, ಸುಳಿಗಾಳಿಯಂತೆ, ಸೈಸಲಸಾಧ್ಯಮಾದ ನಗೆಯೊಂದು, ಹೃದಯಾಬ್ಜದತ್ತಣಿಂ, ತಿರ್ರನೆ ತಿರುಗಿ ಮೇಲೆರ್ದುದಲ್ಲದೆ, ನಿನ್ನಂ ಹಾಸ್ಯಂ ಗೆಯ್ದುದಲ್ಲಂ.

ನಂದಂ — ಸರ್ವಜ್ಞನೆ, ಅಂತಾದೊಡೆ ಕೃಷ್ಣನ ಈಗಳಿನ ಅವಸ್ಥೆಯೊಳ್ ಅದೇಂ ಬಿಸೇಸಂ?

ನಾರದಂ—ಅದನುಸಿರಲೆಂದೇ ಯೋಚನೆ, ಆದೊಡೆ ಆಗುಟ್ಟಂ ಪೇಳ್ವುದೋ, ಕೃಷ್ಣಂಗೆ ಕೋಪಂ—ಪೇಳದಿರ್ಪುದೋ, ಮನಸ್ಸಾಕ್ಷಿಗೆ ವಿರೋಧಂ—ಅದರಿಂ "ಉಗುಳ್ದೊಡೆ ಅಮೃತಂ ನುಂಗಿದೊಡೆ ಬಿಸಂ" ಎಂಬಂತೆವೊಲ್ ಉಭಯಸಂಕಟಂ ಈನಾರದಂಗೊದವಿತಲ್ತೆ! ಇರ್ಕೆ, ಸಂಕಲ್ಪಹಾನಿಯಂ ಗೆಯ್ಯಲಾಗದುದರಿಂ ಪೇಳ್ವೆಂ: ನಿನ್ನಣುಗಂ, ಕೃಷ್ಣಂ, ಈಗಳ್ ಆರಾಧೆಯ ತಂಗೆಯಪ್ಪ ಚಂದ್ರಾವಳಿಯೆಂಬ ಬೆಡಂಗುಗಾರ್ತಿಯೊಡನೆ ಪಗಲುಮಿರುಳುಂ ನಲಿವಂ. ಬಹುಕಾಲದಿಂ ಮಕ್ಕಳಿಲ್ಲದೆ ದೈವದೊಲ್ಮೆಯಿಂ ಪಡೆದುದರ್ಕೆ ಈ ಬಾಲ್ಯದೊಳೇ ಮಗಂಗೆ "ಪರದಾರಾಪಹಾರಂ" ಎಂಬೊಂದು ಪೊಸಬಿಜ್ಜೆಯಂ ಕಲಿಸಿದೆ, ನಿನ್ನ ಕುಲಮಿನ್ನು ಪಾವನಮಕ್ಕುಂ, ಕೀರ್ತಿಯೋ, ಧ್ರುವಲೋಕಪರ್ಯಂತಂ ಪರ್ಬಿತು; ಇನ್ನೇಂ ಕೊರತೆ? ಪತ್ತುಜನದ ಕಳದೊಳ್, ನೀನುಮೊರ್ವಂ ಸಭ್ಯನಾದೆ.

ನಂದಂ—(ಅಚ್ಚರಿವಟ್ಟು) ದೇವಮುನೀಂದ್ರ, ಸತ್ಯವಾದಿಯೆಂದು ನೆಗಳ್ತೆವಡೆದ ನಿನ್ನ ನುಡಿಯುಂ ಈಗಳ್ ಸಂದೇಹಾಸ್ಪದಮಾಗಿರ್ಪಂ; ಅದೇಕೆಂದೊಡೆ, ಆ ಚಂದ್ರಾವಳಿಯ ಗಂಡಂ ಚಂದಂ ಕೃಷ್ಣನುಪಟಳಕೆ ಬೆದರ್ದು ಸಕುಟುಂಬಮಾಗಿ ಸಿಂಧುಗ್ರಾಮದೊಳ್ ಮನೆಗೆಯ್ದಿರ್ಪಂ. ಅಲ್ಲಿ ಇರ್ಪಾಗಳುಂ, ವರ್ಷಕ್ಕೊರ್ಮೆ ತಾಯ್ಮನೆಗೆ ಬಂದೊಡುಂ, ಆಪೆಣ್ಗೆ ಒಳಯಿಂಕೆಯಿಂ ಪೆರಗೆ ನಿಲುಕಲುಂ ಬಾರದೆಂಬ, ಕಟ್ಟಾಣತಿಯಂತೆ; ಅಂತಿರೆ ಕೃಷ್ಣಂಗೆ ಕೈಯೆಂತು?

ನಾರದಂ—ನಿನ್ನ ಗ್ರಾಮ್ಯವಚನಂಗಳಂ ಕೇಳ್ದೊಡೆ, ಇದೋ ದ್ವಾರಂಗಳೊಳೆಲ್ಲಂನಗೆ. "ಗಾಳಿಪೋಗದ ತಾಣಮುಂಟೆ?" ಎಂಬಂತೆವೊಲ್ ಕೃಷ್ಣಂಗೆ ಸಾರಲಸಾಧ್ಯಮಾದ ಎಡೆಯುದಾವುದು? ಅಂತುಮಲ್ಲದೆ ಪೆಣ್ಗಳುಂ ಕಣ್ಣಿಟ್ಟವನಂ, ಎಂತಾನುಂ ವರಿಸದೆ ಮಾಣರ್. ಅದರ್ಕೆ ಒಂದು ಕಥೆಯುಂಟು ಪೇಳ್ವೆಂ—

ಮುನ್ನಂ ಬೊಮ್ಮಂಗೆ ಮಾನಸಪುತ್ರಿಯಾಗಿ ಒಯ್ಯಾರದ ಬಿತ್ತಿನಂತೆ, ಒಂದು ಪೆಣ್ಗೂಸು ಪುಟ್ಟಿತು. ಅಂತೆ ಪುಟ್ಟಿದ ಮಗಳ ಆಕಾರಮಂ ನೋಡಿ ಬಗೆಗೊಂಡು, ಅವಳ್ಗೆ ಆವಾಣೀವರಂ "ಮೋಹಿನಿ" ಎಂದು ಪೆಸರಿಟ್ಟಂ. ತದನಂತರಮಾಬಾಲೆ, ದಿನಕ್ರಮಂ ಏಳ್ಗೆಯೊಂದುತೆ, ಯೌವನಾವಸ್ಥೆಯಂ ಅಲಂಕರಿಸಿ, ತಂದೆ ತನಗಿಟ್ಟ ಪೆಸರಂ ಸಾರ್ಥಕಂಗೆಯ್ಯದಿರಲಾಗದೆಂಬಂತೆವೊಲ್, ಮನೆಯುವರೆಂದಿಲ್ಲಂ ಊರವರೆಂದಿಲ್ಲಂ ಕಂಡವರೊಳ್ ಕಣ್ಣಿಡಲ್, ಆರಂಭಿಸಿದಳ್. ಅಂತೀಕೆ ಕಡೆಕಣ್ಣಪಾಶಮಂ ಬೀಸಿದೊಡೆ, ಚಂಚಲಮಾಗದ ಗಂಡುನೊಳಮಾದೊಡುಮಿಲ್ಲಂ ಎಂದಾಯ್ತು; ಬಳಿಯಂ ದಿನೇದಿನೇ ಆ ಪೆಣ್ಣಿನ ಅಂತಶ್ಚೇಷ್ಟೆಯಂಕುರಂ, ಬಹಿರಂಗಕೆ ತಲೆದೋರುತ್ತಿರಲರಿತಾ ವಿರಿಂಚಿ, "ಅಃ! ಮಗಳಂ ಅಳ್ಕರಿಂ ಪಡೆದು, ಮಂಡಿಗೆಯಾಸೆಯಿಂ, ಪಾವಿನ ಪೆಟ್ಟಿಗೆಯಂ ಕರ್ಚಿದ ಇಲಿಯಂತಾದೆಂ ಪುತ್ರಿಯೇ ಶತ್ರುವಾದಳ್. ಅಕಟಾ! ಲೋಗರ ತಲೆಯೊಳ್, ಬೆರಲನೊತ್ತುವ ಎನ್ನತಲೆಯ ಅಕ್ಕರಂ, ಇಂತುಟು, ಹೀನಮಾಯ್ತೆ! ಹುಂ, ಇರ್ಕೆ, ಇನ್ನಾದೊಡುಂ, ಆ ಮೋಹಿನಿಯಂ ತಕ್ಕವರಂಗೆ ಕೊಟ್ಟು, ವಿವಾಹಂಗೆಯ್ಯೆದೊಡೆ, ಆಕೆಯ ದುರ್ವೃತ್ತಿಗುಂ, ಆನೆಯೆ ಜನಕನಪ್ಪೆಂ, ಎಂದೆಣಿಸಿ ಬಹುದೂರಂ ಚಾನಿಸಿ, ಸರ್ವಲೋಕದೊಳುಂ ಇರ್ಪ, ಪಾಪಿಗಳನೆಲ್ಲರಂ ನಿಯಮಿಸುತೆ, ಅನ್ವರ್ಥನಾಮನಪ್ಪ ಯಮಂಗೆಯೆ ಇತ್ತೊಡೆ, ಒರ್ಮೆಗೆ ಕವಲ್ದಾರಿಯಂ ಮೆಟ್ಟದಿರಲ್ ಸಾಲ್ಗುಂ, ಎಂದು ಬಗೆದು ಅಂತೆ ಆಧರ್ಮನಂ ಒಪ್ಪಿಸಿ, ಮಗಳಂ ಅವಂಗೆಯೆ ಪಾಣಿಗ್ರಹಣಂಗೈದಂ, ಬಳಿಯಂಕೆಲಗಾಲಂ ಕಳೆಯೆ, ಕತ್ತುರಿಯುನೊಳಗಿಟ್ಟೊಡುಂ, ಮಣಂ ಪಸರಿಸುವಂತೆ, ಯಮನೆನಿತೆನಿತುಂ ಅಜ್ಞೆಗೆಯ್ವನೋ, ಅನಿತನಿತುಂ ಆಮೋಹಿನಿಯ ವಿಕೃತಿಗಳ್ ಪೆರ್ಚಿದುವು.

ಅದನರಿತಾ ಪ್ರೇತಾಧಿಪಂ, ಒಂದು ಪೊನ್ನಕರಂಡದೊಳ್, ಅವಳಂ ಬೈತಿಟ್ಟು, ತನ್ನ ಕೊರಲಮಾಲೆಯೊಳ್ ಕಟ್ಟಿ, ರಾತ್ರಿಯೊಳ್ ಸಜ್ಜೆಯೊಳ್ ಮಾತ್ರಂ ಆಕೆಯಂ ಪೆರದೆಗೆದು, ತಡಂಮಾಡದೆ, ಆಕರಂಡದೊಳ್ ಹಾ

ಯ್ಯುಕ್ತಿರ್ದಂ. ಇಂತಿರಲೊಂದುದಿನಂ ಯಮಂ, ನಿದ್ರಾಂಗನೆಯ ಬೆಡಂಗಿಗೆ ಮರುಳಾಗಿ, ತನ್ನರಸಿಯಂ ಕರಡಿಗೆಯೊಳ್ ಮುಚ್ಚಿ ಇಡಲ್ ಮರೆತು, ಮೆಯ್ಯನುಂ ಮರೆತಂ. ಆಗಳ್, ಮೋಹಿನಿ, "ಅಬ್ಬಾ! ಕಟ್ಟಿದ ಉಸಿರ್ ಬಿಟ್ಟಂತಾಯ್ತು" ಎಂದೆಣಿಸಿ, ಮುಂದೆ ತನಗೆ ಮರುಳಾಗಿಯೇ ಎಂಬ ಪೋಲ್, ಸೊಡರೊಳ್ ನಲಿನಲಿವ ಅಗ್ನಿಗೆ ಬಾಯೆಂದು ಸನ್ನೆಗೆಯ್ದಳ್. (ಪೆಣ್ಣೇ ಕರೆವಾಗಳ್ ಪುರುಷನ ಬಗೆಯದೆಂತಿರ್ಕುಂ? ಮೇಣೇಂ, ತಾನೇ ಸರ್ವಗುಣಸಂಪನ್ನಂ ಸ್ಮರಸುಂದರನೆಂದಿರ್ಕುಂ) ಆಃ! ಅಜ್ಞಾನಾಂಧಕಾರಂ ತನ್ನನುಂ ಮುತ್ತೆ, ಆ ಶಿಖಿ ಸ್ವರೂಪದೊಡನಿವಳ ಮೋಹಕೆ ಪಕ್ಕಾದಂ. ಅಂತಿರಲ್, ಅರೆಚಣದೊಳ್ ಎಚ್ಚರವಾಗಲ್, ಮುಂದಣ ಅವಸ್ಥೆಯಂ ಕಂಡಾ ಕಾಲಂ, ರೋಷಾವೇಷದಿಂ ಅವುಂಕಿ, ಮೋಹಿನಿಯನಾ ಕರಡಿಗೆಯೊಳ್ ನುರ್ಗಿಸಿ, ಬಾಯಂ ಬಲಿದಂ; ಆಗಳ್ ಕೋಪದ ಅಸವಸದೊಳ್ ಮುಂಗಾಣದೆ, ಮೋಹಿನಿಯೊಡನಗ್ನಿಯುಂ ಪೊಕ್ಕುದನರಿತನಿಲ್ಲಂ—

ಬಳಿಯಂ ಯಮಂ "ಆಃ! ಪೆಣ್ಗಳ ಉಪಾಯಮೆ!! ಎನ್ನಂ ಕಣ್ಣಟ್ಟಿದ ಈ ಜಾತಿಯ ಬಲ್ಮೆಯಿಂ ನೆಲದೊಳ್ ಮನುಜರೆಂತು ಬಾಳ್ವರೊ!!! ಒರ್ವನೊಳ್ ಮಾತು, ಪೆರನೊಳ್ ಕಡೆಗಣ್ಣು, ಅನ್ಯಗನೊಳ್ ಮೇಳಂ, ಈ ಪರಿಯಿಂದಿರ್ಪಳಂ ಬೊಮ್ಮನೇಕೆ ಪಡೆದನೊ? ಮೆಣಿನಗೇಕೆ ಗಂಟಿಕ್ಕಿದನೊ? ಒರ್ಮೆಗೆ ಈಕೆಯುಂ ಮನೆಯಿಂ ಪೊರಡಿಸಿದೊಡೆ, ಮೇಲಕೆ ಉಗುಳ್ದೊಡೆ ಮೊಗಕೆಯೆ ಬೀಳ್ವಂತೆ, ಲೋಕದೊಳೆಲ್ಲಂ ಇವಳ ದುರ್ವೃತ್ತಿಯ ಬಿಸೆಯುಂ ಪಸರಿಸಿ, ಬಳಿಯಂ ಎನ್ನ ಮೋರೆಗೆ ಮಂಗಳಮುಕ್ಕುಂ, ಅಕಟಾ! ಈ ಯಮರಾಜಂಗುಂ ಈ ಯವಸ್ಥೆಯೆ!!" ಎಂದು ಪರಿಪರಿಯಿಂ ಚಿಂತಿಸುತೆಂತಾನುಂ ಇರುಳಂ ಕಳೆದಂ.

ತದನಂತರಂ, ಮರುದಿನದೊಳ್ ಪ್ರದೋಷೋತ್ಸವಕೆಂದು, ದಿಕ್ಪಾಲಕೆಲ್ಲರುಂ ಕೈಲಾಸಕ್ಕೈದುತಿರಲ್, ಉಪಾಯಮಿಲ್ಲದೆ, ತಾನುಂ ಪೋದಂ. ಅಂತಾರಜತಾದ್ರಿಯೊಳ್, ಉತ್ಸವಾಂತ್ಯದೊಳ್, ಸರ್ವವೇದಿಯಪ್ಪ ಷಣ್ಮುಖಂ, ಎಲ್ಲರ್ಗುಂ ತಾಂಬೂಲಮಂ ನೀಡುತ್ತೈತಂದು, ಕಾಲನಂ ಕಂಡು,

'ಓ! ಇವನೆಲ್ಲರಂತಲ್ಲಂ, ಧರ್ಮರಾಜನಲ್ತೆ? ಮೂಲೋಕಮುಂ ಈತನ ನಿಯಮಮಂ ಅನುಸರಿಪುದು, ಬಹುಮಾನಿಯೆ ನಿಜಂ" ಎಂದು ನಕ್ಕು ತಂಬುಲದ ಮೂರು ಮಡಿಕೆಗಳನಿತ್ತಂ

ಯಮಂ — (ಷಣ್ಮುಖನ, ಮುಖವಿಕಾರಕುಂ, ಮಾತಿನಂದಕುಂ, ಸಂದೆಯಂಗೊಂಡು) "ಇದೇಂ, ನೀನೆನಗೆ ಮಾತ್ರಂ, ಮೂರು ಮಡಿಕೆಗಳ ನಿತ್ತುದು?"

ಷಡ್ವದನಂ — (ನಸುನಕ್ಕು) "ನೀನೆಲ್ಲವಂ ತಿಳಿದವನಾಗಿ, ಇದನೊಂ ದಲ್ಪ ವಿಷಯಮನೇಕೆ ಕೇಳ್ದಪೆ? ಕೊಟ್ಟುದಂ ಕೊಂಡು "ಮೌನಂ ಪಂಡಿತಲಕ್ಷಣಂ" ಎಂಬಂತೆ ಬರಿದೆ ಇರಯ್"

ಅಂತಕಂ — (ಕೋಪದಿಂ,) "ಎಲೆ ಷಾಣ್ಮಾತುರ! ಬಂದೆ ಪರಿ ಹಾಸ್ಯಂಗೆಯ್ದೊಡಾಯ್ತೆ? ಹುಂ ಪೇಳ್ ಪೇಳ್."

ಷಣ್ಮುಖಂ — (ನಕ್ಕು) "ಮರದ ಬೆಂಕಿ, ಮರಮನೆ ಉರಿಸುವಂತೆ, ಕೋಪಮಿದು ನಿನಗೆಯೆ ದೋಸಂ ಕಣಾ. ಎನಗೇಂ, ಇದೊ ಪೇಳ್ವೆಂ, ಈಯೆರಡು ಮಡಿಕೆಗಳ್, ನಿನಗುಂ, ನಿನ್ನ ಕೊರಲ ಉರುಲೆನಿಪ್ಪ ಮೋಹಿನಿಗುಂ" ಎಂದು ಇನಿಸುಂತಡೆದು, "ಇನ್ನೊಂದಿದುಮಾರ್ಗೆ, ಎಂಬ ವಿಚಾರಮಾದೊಡುಂ ಬೇಡಂ."

ಯಮಂ — "ಇದೋ, ಮುನಿಸಂಪೊರೆಯದಿರ್, ಇನ್ನೆಗಂ ನಿನ್ನ ವಿಕೃತಿವಚನಂಗಳಂ ಸೈಸಿದೆಂ. ಇನ್ನಾನುಂ ಹಾಸ್ಯಮನೆತ್ತದೆ ನಿಜಮಂ ಪೇಳ್"

ಷಡ್ವದನಂ — (ಅಃ ಇವನ ಅಜ್ಞಾನಮೆ! ಎಂದೆಣಿಸಿ,) ಪ್ರೇತಾ ಧಿಪ! ಏನಿದು ಅವಳೊಡನಿರ್ಪ ಅಗ್ನಿಗೆಂದು ಪೇಳದೆ ತೀರದೆ?"

ಅಂತಕಂ — ಆ ನುಡಿಗೇಳ್ದು, ಮಾನದ ಭಯದಿಂ ಉಮ್ಮಯೊಳ್ ಗಣ ಕಿರ್ಚಿನಂತೆ ಮನದೊಳ್ ಉರಿದು, ಮನೆಗೈದಿ ಕೊರಲ ಕರಡಿಗೆಯಂ ಒಡೆಯುಲ್, ಅದರೊಳಗಿರ್ಪರಂ ಕಂಡು, ಕಾಳ್ಗಿರ್ಚಿಗೆ ಗಾಳಿ ಸಾಯಮಾ

ದಂತಾಗೆ ಮುಳಿದಬ್ಬರಿಸಿ 'ನಿನಗೆ ಕಡೆಗಾಲಮಂ ತೋರದೊಡೆ ಆಂ ಕಾಲನೆ?' ಎಂದಾಕೆಯುಂ ಪರಿಪರಿಯಿಂ ಭಂಗಿಸುತ್ತಿರೆ ಬೊಮ್ಮಂ ತಿಳಿದೈತಂದು, 'ಎಲೆವೈವಸ್ವತ! ಚಿತ್ರದೊಳ್ ಬರೆದ ಪೆಣ್ಣೊಳಮನುಂನಂಬಲಾಗಂಬರ್ ಬಲ್ಲರ್, ಅಂತಿರಲ್ ಈ ಮೋಹಿನಿಯುಂ ನಂಬುವುದೆಂತು?'

ಬರಿದೆ ಈ ತೆರದಿಂ ಮನೋವ್ಯಥೆಯುದೇಕೆ? ಈಕೆ ಇನ್ನೆಮ್ಮ ಎಡೆಯೊಳಿರದೆ, ಧಾರಿಣಿಯೊಳ್ ಗಿಡುವಾಗಿ ಪುಟ್ಟುಗೆ; ಧೂಮಧ್ವಜನಪ್ಪ ಅಗ್ನಿಯಂ ಕೂಡಿದುದರಿಂ, ಆ ಗಿಡುವುಂ ಧೂಮಪತ್ರಮೆಂಬ ಪೆಸರಂ ತಾಳ್ಗೆ; ನೀನೆಂತೆಂತು ಈಕೆಯಂ ಭಂಗಿಸಿದೆಯೊ, ಅಂತಂತೆ ಜನರುಂ ಆ ಸಸಿಯುಂ ತಲೆ ಕೆಳಗಾಗಿ ಕಟ್ಟುಗೆ; ಬಳಿಯುಂ ಕಟ್ಟಂ ಕಟ್ಟಿ ಮೆಟ್ಟುಗೆ; ಈಯಗ್ನಿಯುಂ ಸುಣ್ಣದ ರೂಪಮಂ ತಾಳ್ದು ಅದರೊಡಂಗೂಡುಗೆ; ಮೇಣೇಂ, ಆ ಧೂಮಪತ್ರಂ ಆಗಿದೊಡುಂ ಪುಡಿವುಡಿಯಾದೊಡುಂ, ಉರಿದು ಪೊಗೆಯಾದೊಡುಂ, ಜನರಂ ಮೋಹಿಸುಗುಂ. ಅದರ ಬಲ್ಮೆಗಳೆಲ್ಲವುಂ, ಕಲಿಯುಗದೊಳೆ, ವ್ಯಕ್ತಮಕ್ಕುಂ; ಎಂದಂ.

ಎಲೆ ನಂದ! ಪೆಣ್ಗಳ ಬಲ್ಮೆಯುಂ ತಿಳಿದಯ್. ಎನಿತ್ತೋ ಅಡಂಗಿಗೈದ ಪಾಪಕ್ಕಾದೊಡುಂ ಮರ್ದಂ ಮಾಳ್ಪ ಯಮನನುಂ ವಂಚಿಸುಗುಮೆನಲ್, ನಿನ್ನ ಬಡಚಂದನ ಪಾಡದೇಂ?

**ನಂದಂ** — (ಕಡುದುಗುಡದಿಂ) ಆಃ! ಮಗಂಗೆ ಇಂದೊ, ನಾಳೆಯೊ, ಬುದ್ಧಿ ವರ್ಕುಮೆಂದೆಣಿಸಿರ್ದೆಂ, ಏಂಗೆಯ್ವುದು "ದುಷ್ಪುತ್ರಃ ಕುಲನಾಶಾಯ" ಎಂಬಂತೆವೊಲ್, ಮಗನೆ ಪಗೆಯಾದಂ. ಅಹೋ ನೀಚನಪ್ಪ ಬಿದಿಯ ಮಾಟಮೆ?

**ನಾರದಂ**—"ತರಳನಂ ಈ ಬಾಲ್ಯದೊಳ್ ಮೇಪಿನ ಮಕ್ಕಳೊಳ್ ನಲಿಯಿಸಿ, ಈಗಳ್ ಎನ್ನಪ್ಪಂಗೆ ಅಪವಾದಮೆ? 'ಅಂಗಳದೊಳ್ ಹೇಸಿಕೆಗೈದು ಮಂಗಳನಂ ಬೈವುದೆ?' ನೀಂ ಮಗನಂ ತಲೆಯೊಳ್ ಪೊತ್ತೆ, ಅವಂ ಮೆಟ್ಟಿದಂ; ಅದಿರ್ಕೆ, ಇನ್ನಾನುಂ ಜನಮಂ ಕಳುಪಿ, ಆ ಕೃಷ್ಣನಂ ಬರಿಸು (ಎಂದುಸಿರ್ದು ತನ್ನೊಳೆ, ಎನ್ನ ಕೆಲಸಂ ನೆರವೇರಿತು. ಇನ್ನಿನ್ನೊಂದೆಡೆ

ಯೊಳ್ ಎಲ್ಲಾದೊಡುಂ, ಎಡೆಯಿರ್ಪುದೋ ನೋಳ್ಪೆನೆಂದೆಣಿಸಿ, ನಂದನೊಳ್ ಪೇಳ್ದು ಅಲ್ಲಿಂ ಸರಿದಂ)

ತದನಂತರಂ **ನಂದಂ**—(ರಾಧೆಯುಂ ಕರೆಯಿಸಿ) ಎಲೆ ರಾಧೆ! ಎಮ್ಮಣುಗಂ ಕೃಷ್ಣಂ, ನಿನ್ನ ತಂಗೆ ಚಂದ್ರಾವಳಿಯೊಡನೆ, ನಲಿವನೆಂದು ನಾರದಂ ಪೇಳ್ದಂ. ಅಕಟಾ! ಈ ಮಗಂ ಗೋಕುಲದ ಪೆಣ್ಗಳ ಪಾಲಿಗುಂ, ಅಪ್ಪಂಗೆನಗೆ ಅಪವಾದದ ಸವಿಯಂ ತಿಳಿಸಲುಮಾದನಲ್ತೆ! ಅದೆಂತಾನುಮಿರ್ಕೆ, ನೀನೀಚಣಮೆ ಆಳ್ಗಳೊಡನೆಯ್ದಿ, ಎಂತಾದೊಡುಂ ಆ ದುಶ್ಚೇಷ್ಟಿಯನೊಡಂಗೊಂಡು ಬಾ (ಎಂಬುದುಂ)

(ಕೃಷ್ಣಂ ಚಂದ್ರಾವಳಿಯೆಡೆಗೆಯ್ದಿರ್ಪನೆಂಬ ನುಡಿಗೆ ರೋಮರೋಮಂಗಳೊಳ್ ಮುಚ್ಚರಮಂಕುರಿಸೆ,) ರಾಧೆ ಆಭಟರನೊಡಂಗೂಡಿ ಚಂದನ ಮನೆಗೆ ಬಂದಳ್. ಬರ್ಪಾಗಳ್ ದೂರದೊಳೆ ಅದೋ ಅವನೆ ಚಂದಂ, ಆತನಂ ಬೆದರಿಸಿ ಎನ್ನೆರೆಯನಂ ವಿಚಾರಿಸಿಮೆಂದು ಪೇಳೆ, ದೂತರ್ ಯಮದೂತರೆಂಬವೊಲ್, ಚಾವಡಿಯೊಳ್ ಕುಳಿತಿರ್ಪ ಚಂದನಂ ಬಂದು ಪಿಡದರ್. ಆಗಳ್ ಚಂದಂಗೆ ಏನೆಂದರಿಯದು, ಇದೇನಾಕಸ್ಮಿಕಮೆಂದು ಬೆದರ್ದು, "ಎಲೆ ಚಾರರೆ? ನೀಮಾರ ಕಡೆಯವರ್? ಈ ಪರಿಯೊಳೆನ್ನಂ ಪಿಡಿಯಲ್, ಆಂ ನಿಮ್ಮರಸಂಗೊ, ನಿಮಗೊ, ಏನುಮಪರಾಧಂಗೆಯ್ದುದಿಲ್ಲಂ."

**ದೂತರ್**—"ಹುಂ ಸಾಲ್ಗುಂ, ಅದೆಲ್ಲಮಂತಿರ್ಕೆ, ನೀನಾರ್ ಚಂದನಲ್ಲವೆ?"

**ಚಂದಂ**— ಅಪ್ಪುದು, ಆನೆ ಚಂದಂ, ಅದರಿನೇಂ? ಮೇಣ್ ನಿಮ್ಮಿರಮುಮೇಂ?

**ಚಾರರ್**—"ಓ ಲಜ್ಜೆಗೆಟ್ಟ ಜೀವಮೆ! ಆಮಿನಿಬರುಂ, ನಂದಗೋಪನ ಕಡೆಯವರ್; ಆ ನುಡಿ ಪೋಕೆ, ನೀನೇನೀಗಳ್ ಪೆಂಡತಿಯುಂ ಕೊಟ್ಟಾದೊಡುಮೆಮ್ಮ ಪುಟ್ಟಸಾಮಿಯುಂ ವಶೀಕರಿಪೆನೆಂದೆಣಿಸಿ ಪೇಳು!"

ಚಂದಂ—(ಬೆರಗಾಗಿ) "ದೊಡ್ಡಿದನ ಕಡೆಯುವರೆಂದು, ಇಂತೆಲ್ಲಂ ಪೊಲ್ಲದುದಂ ನುಡಿವುದೊಳ್ಳಿತಲ್ಲಂ. ನಿಮ್ಮ ಅರಸುಮಗನಂ ಆರ್ ಕಂಡಿರ್ಪರ್."

ಚಾರರ್—"ಚೀ! ಕಿರಿಯರಸನಂ ಸಜ್ಜೆವನೆಯೊಳ್ ಪುಗಿಸಿ, ಈ ಪರಿಯೊಳ್ ಲೋಕದ ಕಣ್ಣಂ ಕಟ್ಟಲ್ ಪ್ರಯತ್ನಿಪುದರಿಂ, ನಿನಗೆ ಎರಳ್ಗೇಣಿನ ಬಳ್ಳಿಯೊ, ಕಾಸಿನ ಬಿಸವೊ, ಏನಾನುವೊಳ್ಳಿತು. ಅದಿರ್ಕೆ, ಎಮ್ಮ ದೊರೆಗುವರನೆಲ್ಲಿದಂ? ತೋರ್" (ಎಂದು ತಟ್ಟಿಸಿದರ್).

ಒಡನಾ ಚಂದಂ—(ಅವರ ಪಿಂದಿರ್ಪ ರಾಧೆಯಂ ಕಂಡು) "ಓ ಅತ್ತಿಗೆ! ಇದೇಂ ನಿನ್ನರಸನ ದೂತರ್ ಎನ್ನನಿಂತು ಬನ್ನಂಬಡಿಪುದುಂ, ಪೊಲ್ಲದುದಂ ನುಡಿವುದುಂ ತಕ್ಕುದೆ? ನಿನ್ನಿದಿರೊಳೆ, ಇಂತೆಲ್ಲಂ ಮಾಳ್ಪುದರಿಂ, ನಿನೇ ಅವಮಾನಿಸುವುದೆಂದಾಯ್ತು."

ರಾಧೆ—(ನಕ್ಕು) "ಎನ್ನಂ ಬರಿದೆ ದೂರದಿರ್; ಆ ಕಲಹಾನ್ನಂ ನಾರದಂ ಬಂದು, ಎಮ್ಮ ಪಿರಿಯರಸನೊಡನೆ ನಿನ್ನ ಮಗಂ ಸಿಂಧುಗ್ರಾಮಕೆಯ್ದಿ, ಚಂದಂಗೆ ತಮ್ಮನಾಗಿರ್ಪನೆಂದೊರೆದಂ. ಅದರ್ಕೆ ಪಲವುಂ ಪರಿಯಿಂ ಪಲುಂಬಿ, ನೀನಾದೊಡುಂ ಆ ದುರ್ವಿನೀತನಂ ಕರೆತರ್ಪುದೆಂದೆನ್ನನಟ್ಟಿದಂ. ಅದರಿಂ ದೊರೆಯಾಣತಿಯಂತೆ ಇವರೊಡನೆ ಬಂದೆನಲ್ಲದೆ ಬೇರೇನುಮಲ್ಲಂ. ಅದೆಲ್ಲಮಿರ್ಕೆ, ಎನ್ನೆರೆಯನೆಲ್ಲಿದಂ?"

ಚಂದಂ—"ಏನಾಜಗಳಗಂಟಂ ಈಗಳ್ ಪೊಲ್ಲದ ಪುಸಿಯನುಸಿರಲುಂ ಕಲ್ತನೆ? ಅದು ಪೋಕೆ, ಆ ನಿನ್ನೆರೆಯಂ ಕೃಷ್ಣನಿಲ್ಲಿರಲೇಂಕಜ್ಜಂ? ಆಮಿಲ್ಲಿ ಒಕ್ಕಲಾದ ಬಳಿಯಂ ಮೊನ್ನೆ ನೀನಲ್ಲದೆ ಗೋಕುಲದವರಾರುಂ ಬಂದರಿಲ್ಲಂ."

ರಾಧೆ—ನಿನಗೇಂ ಕನಸೆ? ಆನಿಲ್ಲಿಗೆ ಮೊನ್ನೆ ಬಂದುದಿರ್ಕೆ, ನಿನ್ನಂ ಕಾಣದೆಯೆ ಎನಿತ್ತೋ ಬರಿಸಂಗಳಾದುವು."

ಚಂದಂ—"ನಿನ್ನ ನುಡಿಯುಂ ಕೇಳ್ದೊಡೆ ಈ ಪುಸಿಯೆಲ್ಲವಂ ಪುಟ್ಟಿಸಿದುದೆ ನೀನೆಂದು ಕಾಣ್ಬುದು."

ರಾಧೆ—"ಅದೆಂತು?"

ಚಂದಂ—"ಎಚ್ಚರಮಿಲ್ಲದನನೆಬ್ಬಿಸಿದೊಡುಂ, ಎಚ್ಚರಮಿರ್ದನನೆಬ್ಬಿಪುದಸಾಧ್ಯಮಾದಂತೆ, ತಿಳಿದುಂ ತಿಳಿಯೆನೆಂಬರ್ಗೆ ತಿಳಿಸಲ್ ಭಗೀರಥ ಪ್ರಯತ್ನಮುಂ ನಿಷ್ಫಲಮಕ್ಕುಂ."

ರಾಧೆ—"ನಿನ್ನ ನುಡಿಯುಂ ಕೇಳ್ದೊಡೆ, ಕಣ್ಣಂ ಕಟ್ಟಿ ಕಾಡಿನೊಳ್ ಬಿಟ್ಟಂತಕ್ಕುಂ; ಏಂ ಬಿರ್ಚಿ ಪೇಳಲಾಗದೆ?"

ಚಂದಂ—"ನೀನೆಮ್ಮ ಮನೆಗೆಯ್ತಂದುದುಂ, ಎನ್ನೊಳೇನೋ ಕೋಪಿಸಿ, ಬಳಿಯಂ ಸಂತಂಗೊಂಡುದುಂ, ಆವುದ್ದಿರುಳೊಳ್ ಎಮ್ಮಿಲ್ಲೊಳ್ ಇರ್ದುದುಂ, ಮರುದಿನಂ ಪೋಪಾಗಳ್, ನಕ್ಕು 'ಓ ಚಂದ! ಇದೋ ನಿನ್ನ ಪೆಂಡತಿ ನಿನ್ನ ಬಸಮಿನ್ನು,' ಎಂದೆನ್ನೊಳ್ ನಗುನುಡಿಯನುಸಿರ್ದುದುಂ, ಒಂದುಂ ನೆನಂಬರಿಕೆಯಿಲ್ಲದಳೊಳ್ ಪೇಳ್ವುದೇಂ!"

ರಾಧೆ—(ಆ ನುಡಿಗೇಳ್ದು ಕೃಷ್ಣನ ಕೆಲಸಮೆಂದೇ ಭಾವಿಸಿ ನಕ್ಕು) "ಎಲೆ ಚಂದ! ಆಂ ಬಂದುದಿಲ್ಲಂ, ಮೋಸಮೇಂ? ನೀಂ ಪೆಂಡತಿಯನಾವನ ಭಯದಿಂದಡಂಗಿಸಿದೆಯೊ, ಆ ಮಾಯಾವಿಯೆ ನಿನ್ನ ಕಣ್ಗೆ ಮಣ್ಣಂ ಬಿರ್ಕಿದಂ"

ಚಂದಂ—ರೋಷಾವೇಶದಿಂ "ಏಂ ಕೃಷ್ಣಂ" ಎಂದು ತಟಕ್ಕನೆ ಒಳಗೆಯ್ದಿ ಚಂದ್ರಾವಳಿಯಂ ಜಡಿದುಂ ಸೆಳೆದುಮಬ್ಬರಿಸಿ "ಎಲೆಮನೆಯ ಮಾರಿ! ಮೊನ್ನೆ ನಿನ್ನಕ್ಕನ ರೂಪಮಂ ತಳೆದು ಬಂದವನದಾರ್? ನಿಜಮಂ ಪೇಳ್, ಅಲ್ಲದೊಡೆ ಜೀವಮನೆ ಪಿಂಡುವೆಂ" ಎಂದು ತಟ್ಟಿಪುದುಂ.

ಚಂದ್ರಾ—"ಎಲೆನಲ್ಲ! ಇದೇನೀಪರಿಯಿಂ ತಿಳಿಯದರಂತೆ ನುಡಿವುದು! ನೀನೆನ್ನಂ ಪಂಜರದ ಗಿಳಿಯಂತೆ ಪೊರೆವುತಿರಲ್, ಅನ್ಯರ್ಗೆ ದಾರಿಯದೆಂತು? ನೀಮೆಲ್ಲರುಂ ಆಕೆಯಂ ಕಂಡುಂ ನುಡಿದುಮಿರ್ಪಿರಲ್ತೆ? ಪ್ರತ್ಯಕ್ಷಕೆ ಇನ್ನೇಂ ಪ್ರಮಾಣಂ?"

ಚಂದಂ—"ಮಾತುಗಳೊಪ್ಪಮೆಲ್ಲಂ ಸಾಲ್ಗುಂ, ಇದೋ ನಿನ್ನಕ್ಕನಂ ಬಂದಿರ್ಪೆನೆಂದೊಪ್ಪಿಸು" (ಎಂದು ಪೆರಗುಯ್ದು ತಂದಂ.)

ಚಂದ್ರಾ—ಅಕ್ಕನಂ ಕಂಡು ಭಯಸಂತೋಷಂಗಳೆರಡುಮೊಟ್ಟಿಗೆ ತೊಟ್ಟಿಡೆ, ಏನುಂ ತೋರದೆ ಬರಿದೆ ಇರ್ದಳ್.

ಚಂದಂ—"ಹುಂ, ಏನೀಗಳ್ ಬಾಯಿ ಪೋಲಿದಿರ್ಕುಮೆ? (ಎಂದು ಬಡಿದುಂ ಪೊರಳ್ಚಿಯುಂ ಪರಿಪರಿಯಿಂ ಭಂಗಿಸಿ) ಇದೋ ಬರಿದೆ ಪೆಟ್ಟಿಗೆ ಜೀವಮಂ ಮಾರದಿರ್; ಆ ಬಂದಾತಂ ಪುರುಷನಲ್ಲವೆ?"

ಚಂದ್ರಾ—ಮರುಮರುಗುತೆ 'ಹುಂ' ಎಂದಳ್.

ಚಂದಂ—ಈಗಳ್ "ಹುಂ"-ಹುಂ ಅಂತಾದೊಡೆ ಆ ವಿಶ್ವಾಸಘಾತಕಂ ಎಳೆಯನೊ? ಪಳೆಯನೊ? ಜೌವನಿಗನೊ?

ರಾಧೆ—(ನಕ್ಕು) "ಎಲೆ ಚಂದ! ಬಾಲವೃದ್ಧರಾದೊಡೆ ಮೇಲೇಂ? ತರುಣನಾದೊಡೆ ಕೀಳೇಂ? "ಪರಿವಸೆಯುಂ ಪಾಸಿಗೆಯೊಳೆ ಅಡಂಗಿಪುದು" ಎಂಬಂತೆವೊಲ್ ಬಹುದೂರವಿಚಾರವಂ ಬಿಟ್ಟು, ಉಸಿಕನೆ ಇರ್ಪುದೊಳ್ಳಿತು."

ಚಂದಂ—"ಹುಂ, ಸಾಲ್ಗುಂ, ನಿನ್ನೊಳಾಂ ನುಡಿದೆನಿಲ್ಲಂ; ಮಾನದೊಳಾಸೆಯಿರ್ದೊಡೆ, ಎನ್ನೊಳೀಗಳ್ ಮಾತಾಡದಿರ್" ಎಂದು ಪೇಳೆಂದು ಚಂದ್ರಾವಳಿಯಂ ಭಂಗಿಸುತಿರೆ

ಚಂದ್ರಾ—(ಗೋಳಿಟ್ಟು) "ಇದೆಕೊಳ್ ಪೇಳ್ವೆಂ, ಆ ಮೋಹನಾಂಗಂ, ನಂದಗೆ ಎಳೆಯಂ, ಋಷಿಗಳ್ಗೆ ಪಳೆಯಂ, ಪೆಣ್ಗಳ್ಗೆ ಜೌವನಿಗಂ, ಆಯ್ತೆ? ಇನ್ನಾನುಂ ಪೆಣ್ಗೊಲೆಯ ಪಾಪಕೆ ಪಕ್ಕಾಗದಿರ್"

ಚಂದಂ—(ಕೋಪೋದ್ರೇಕದಿಂ ನುಡಿಯೊಂದೊಂದಂ ಮುಂಚೆ) "ನಿನ್ನಂ ಕೊಂದೊಡುಂ ಪಾಪಮೆ? ಅಂತಾದೊಡೆ ಆ ತಾಟಕೆಯಂ ಮುಡುಪಿದ ರಾಮಂಗೆ ಅಂಧಕೂಪಮೇ ಗತಿ. ಆ ಬಿಸಯಮಿರ್ಕೆ, ನಿನ್ನ ಆ

ಮೋಹಾನಾಂಗನಂ ಇನ್ನೆವರಮುಸಿರಲ್ಕೆ ಏಂ ನಾಲಗೆ ಇಳಿದಿರ್ದುದೆ? ಅಃ! ಅಃ!! ಆನಾಕೃಷ್ಣನುಪಟಳದಿನೆ ನಿನಗೆಂದು ಇನಿತುಂ ದೂರಂ ಮನೆಗೆಯ್ದುದೆಲ್ಲಂ ನೀರಿನ ಹೋಮಮಾಯ್ತು; ನೀನೆನ್ನೊಳೆ ಪೇಳ್ದ ಬಲ್ಲೂರದಿಂ ತರಿಸಿ ಸೀತಾದಿಪತಿವ್ರತಾಚರಿತಪುಸ್ತಕಂಗಳನೋದುತಿರ್ದುದು, ಬೆಕ್ಕಿನ ವ್ರತಮಾಯ್ತು; ಮೇಣೇಂ ಜೀವಮಿರ್ದಂತೆ ಕೊಂದೆ; ನಾಲ್ವರೆಡೆಯೊಳ್ ಮೊಗಮೆತ್ತದಂತೆವೊಲ್ ಮಾಡಿದೆ; ಲೋಕದೊಳಿನ್ನಾರುಂ ಅನುಗುಣಮಿರದ ದಾಂಪತ್ಯಂಗೆಯ್ವುದಂ ಎಮ್ಮಂ ನೋಡಿ ಬಿಡುಗೆ (ಆಗಳ್ ಚಂದ್ರಾವಳಿಯು ಅಳ್ಪೊರಂ "ಹುಂ ಹುಂ" ಎಂಬ ನೆವದಿಂ ಈ ನುಡಿಯೊಂದು ನಿಜಮೆಂದು ಸೂಚಿಸುತಿರ್ದುದು) ಹುಂ ಇನ್ನೇನಾಸೆ? ನಿನ್ನಂ ಕೊಲ್ವೆನಾನುಂ ಅಸುಂಗಳೆವೆಂ" (ಎಂದು ಪರಿಪರಿಯಿಂ ಹಿಂಸೆಗೆಯ್ದಂ.)

ಚಂದ್ರಾ—"ಓ ಅತ್ತೆ! ನೀಮೋ ಅಕೃತ್ರಿಮರಾಧೆಯಂ ಆ ದಿನಂ ಪೋಗಲ್ವಿಡದೆ, ಈಗಳೀಪರಿಯ ಭಂಗಕುಂ ಸಹಾಯಂಗೆಯ್ವುದೆ? ನೀಮುಂ ಅತ್ತೆಯೆಡೆಯೊಳಿರ್ದವರಾಗಿ, ತಾಯ್ತಂದೆವಿರಂ ಬಿಟ್ಟು ನಿಮ್ಮನೆ ನಂಬಿ ಬಂದವಳ್ಗೆ ಈ ಗತಿಯುಂ ಒದಗಿಪುದೇಂ ನೀತಿಯೆ?"

ಸುಮುಖಿ—(ಆ ನುಡಿಗೇಳ್ದು ದುರ್ಮುಖಿಯಾಗಿ) "ಛಿಃ ಸಾಲ್ಗುಂ, ನಿನ್ನ ನಾಲಗೆ ಇನಿತುಂ ನೀಳಮಿರ್ಕುಮೆ? ಬಾಯ್ವಿಡದಿರ್. ಅಂತವಂ ಪುರುಷನಾದೊಡೆ, ಕರೆದು ತಿಳಿಸಲೇನಾಯ್ತು? ತನ್ನಿಚ್ಛೆಯಿಂ ನಲಿದು, ಏನುಮರಿಯದ ಎನ್ನೊಳ್ ಅಪವಾದರೋಪಣೆಯೆ? ಹುಂ "ನಾಯಿ ಕೂಗಿದೊಡೆ ದೇವಲೋಕಂ ಪಾಳಕ್ಕುಮೆ?" ಆನೇಂ ಅತ್ತೆಯೊಳಗಿರ್ದೊಡೆ, ನಿನ್ನಂತೆ ದುರ್ವೃತ್ತಿಯ ಎಣಿಕೆಯುನಾದೊಡುಂ ಗೈದವಳೆ? ಪೆರ್ಚೇಂ ಸ್ವತಂತ್ರದ ಪೆಣ್ಗಳಾರುಂ ಏಳ್ಗೆಯೊಂದಿದುದಿಲ್ಲಂ. ಹುಂ ಹುಂ ಮಾಡಿದ ಕರ್ಮಮಂ ಉಣಲ್ವೇಳ್ಕುಂ."

ಚಂದ್ರಂ—ಆ ನುಡಿಗೇಳ್ದು, ಮರುಳಂಗೆ ಕಳ್ಗುಡಿದಂತಾಗೆ ಕಣ್ಣೀರೆಯಿಲ್ಲದೆ ಬಡಿಯಲಾರಂಭಿಸಿದಂ.

ರಾಘೆ—(ಒಡಲುರಿದು,) "ಎಲೆ ಚಂದ! ಮಾರಿದ ಪಸುವಿನ ಬೆನ್ನಂ ತಿರ್ದುವಂತೆ, ಈಕೆಯ ಬಿಸಯದೊಳಾಂ ನುಡಿವುದು ತಕ್ಕುದಲ್ಲಂ; ಆದೊಡುಂ ಲೋಕದ ಮಾತನೆಂಬೆಂ—ನೀನುಮೊರ್ವಂ ಸಂಸಾರಿಯಾಗಿ ಪೆರರ ಪೆಣ್ಮಕ್ಕಳನಿಂತು ಬನ್ನಂಬಡಿಪುದು ಒಳ್ಳಿತಲ್ಲಂ ಕಣಾ. ತಾಯ್ತುಂದೆವಿರ ಮನಮುದೆನಿತ್ತುರಿವುದೊ? ಅದರಿಂ "ಕೋಪಮೆ ಪಾಪಂ" ಎಂದರಿತು ಒರ್ವುಗೆ ಸೈಸಿ ಬುದ್ಧಿವೇಳ್, ಆನುಂ ಪೇಳ್ವೆಂ."

ಚಂದಂ—"ಹುಂ, ನೀಂ ಬುದ್ಧಿವೇಳ್ವುದೆ ತಾನೀಗಳ್ ಅವಶ್ಯಂ "ನಾಗಂಗೆ ಕೈಮುಗಿದೊಡೆ ತನ್ನಂತೆಯೆ ಆಗೆಂಬುದು ಗಡ" ಅಂತೆ ನಿನ್ನಾಜ್ಞಾನುಸಾರಿಣಿಯುಮಾದೊಡೆ, ಬಳಿಯುಮೀಕೆಯ ಗತಿಯಂ ಕೇಳ್ವುದೇಂ? ಏಂ ನಿಮ್ಮ ತಾಯ್ತುಂದೆವಿರ ಮನಮುರಿವೊಡೆ, ದುರ್ವೃತ್ತಿಯಂ ತಿಳಿದುಂ ಬರಿದೆ ಇರಲ್ವೇಳ್ಕುಮೆಂದು, ಈಕೆಯನೆನಗಿತ್ತರ್? ಅದಿರ್ಕೆ, ಉರಿಗೊಳ್ಳಿಯೊಳ್ ಬೂದಿಯಂತೆ ನೀಮುದಿಸಿ ಅತ್ತೆಯ ಕುಲವತಿವೆಸರಂ ನಿರ್ಣಾಮಂಗೈದಿರಿಂ."

ಸುಮುಖಿ—ಚಂದ! ಆ ನುಡಿಯಂತೆ ಪೋಕೆ, "ಕ್ಷೀರಸಾಗರ ಭಟ್ಟನ ಮನೆಯೊಳ್ ಮಜ್ಜಿಗೆಗೇ ಸೊನ್ನೆ" ಎಂಬಂತೆವೋಲ್ ಪೆಸರಿಂದೇಂ? ನಿನ್ನತ್ತೆ ಕುಲವತಿಯುಂದಮೆಲ್ಲವನರಿವೆಂ, ಮಾಳ್ಪುದೇಂ? "ಮರನೋಡಿ ಬಳ್ಳಿ ಕುಲನೋಡಿ ಪೆಣ್" ಎಂಬ ನುಡಿಯೊಂದು ಮರೆತುದು.

ಚಂದಂ—ಅಪ್ಪುದಪ್ಪುದು, ಹುಂ ಇರ್ಕೆ— ಬಿಸಂ ಮುಟ್ಟಿದ ಬೆರಲನೆ ಕಡಿವಂತೆ ಈಕೆಯನೀಕ್ಷಣಮೆ ಅಗ್ನಿಗೆ ಸಮರ್ಪಿಸಿ ಪರಿಶುದ್ಧನಪ್ಪೆಂ. (ಎಂದು ಕಟ್ಟಿಗೆಗಳನೊಟ್ಟೈಸಿ ಬೆಂಕಿಯಂ ಪತ್ತಿಸಿ ಸುಡುವೆನೆಂದು ಚಂದ್ರಾವಳಿಯುಂ ಸೆಳೆದುಕೊಂಡುವೋದಂ.)

ಆಗಳ್ ಆ ಕೋಳಾಹಳಮನೇನೆಂಬೆಂ!

ಚಂದ್ರಾ—ಹಾ, ಬಿದಿಯೆ! ಅಬಲೆಗೆನಗೆ ಈ ಯುವತೆಯುನೊದವಿಪುದರಿಂ ಪೆರ್ಬುಲಿಯ ಬಾಯ್ಗಾದೊಡುಂ ಕಟ್ಟುವುದೊಳ್ಳಿತಿರ್ದುದು. ಓ

ತಾಯ್ತುಂದೆವಿರ್! ನೀಮೆನ್ನಂ ಎಳೆವರಯದೊಳೆ ಬೊಂಬೆಯನೆಂತಂತೆ ಈ ದುರುಳಂಗೀವುದರಿಂ ಪುಟ್ಟಿದೊಡನೆಯೆ ಮೂಗುವಾಯ್ಗಳಂ ಬಿಗಿವಿಡಿದೊಡೆ ಸೊಗಮಿರ್ದುದಲ್ತೆ? ಹುಂ, ಅದಂತೆ ಪೋಕೆ, ಪೋದ ಬಿಸಯದೊಳ್ ವಾದಮೇಕೆ? ಲೋಕದೊಳ್ ಇನ್ನಾರುಂ ಅನುಗುಣಮಿರದಂಗೆ ಪಣ ಮುಂಟೆಂದು ಪೆಣ್ಣಂ ಕುಡುವುದನೆನ್ನಂ ನೋಡಿ ಬಿಡುಗೆ, (ಎಂದು ಗೋಳಿ ಡುತಿರಲಾಚಂದಂ ಸೆಳೆ ತಂದಂ.)

ಆಗಳ್ ಚಂದ್ರಾ—ಹಾ ಪ್ರಾಣಸಂಕಟಮೊದವಿರ್ಪಾಗಳುಂ ಮಾ ರಿಗೊಪ್ಪಿಪ ಕುರಿಯಂತೆ ಕೂಗುತಿರ್ದೊಡಾವಗತಿಯೊ? ಎಲೆ ಭಕ್ತವತ್ಸಲ! ಅನಾಥಬಂಧು! ಶ್ರೀಕೃಷ್ಣ! ನಿನ್ನಂ ಪೊರ್ದಿದೆನೆಂದೆನ್ನಂ ಈ ದುರುಳ ನೀಪರಿಯೊಳ್ ಬಾಧಿಪುದನುಂ ಲಕ್ಷಿಸದಿರ್ಪುದರಿಂ ನೀಂ ನಿಜಮಾಗಿಯುಂ ಪೂಗಣ್ಣನೆಂದೇ ಭಾವಿಪೆಂ. ಬಿಟ್ಟು ಪೋಪಾಗಳ್ ಸೆರಗಂ ಪಿಡಿದೆನ್ನಂ ಧೈರ್ಯಮೊರೆದು ಸಂತಯಿಸಿದುದನೆಲ್ಲಮಂ ಮರೆತು, ಈಪರಿಯೊಳಸ ಡ್ಡೆಯಂ ತಾಳ್ವುದೇಂ ಒಪ್ಪಿತಮೆ? ಅಂತುಂ ಪೆಣ್ಗೊರ್ವಳಂ ವಂಚಿಸಿ ಮಾರಿಗೆ ಸಮರ್ಪಿಸಿದೊಡೆ ಏಂ ಪೌರುಷಮೆ? ಪೆರ್ಚನುಸಿರಲ್ ಸಮಯಮಿಲ್ಲಂ, ನೀನೇ ಬುವಿಯಾಣ್ಮನಾಗಿ ಇಂತೆಸಗಿದೊಡೆ ಭೂಮಿಯೆ ಬೀಜಮಂ ತಿಂದಂ ತಾಯ್ತು. (ಎಂದು ಗೋಳಿಟ್ಟಳ್)

ಅನಿತರೊಳ್ ಆ ಚಂದಂ ಆಃ! ಬೆಳ್ದಿಂಗಳ್ಗಂ ಬಾಡುವ ತನ್ನಂಗಿ ಯಂ, ಸಜ್ಜೆಯೊಳ್ ಕೆದರ್ದ ಮಲ್ಲಿಕಾಮಾಲತ್ಯಾದಿಪುಷ್ಪಮುಕುಳಂಗ ಳುಂ ಸೂಜಿಯಂತೆ ಕುತ್ತುಗುಮೆಂಬ ಮೆದುಮೆಯ್ಯಳಂ, ಕಾಳಿಯನೊಂದಿದ ಕಾಲಾಂತಕನಂತೆ, ಲೋಕಮನೆಲ್ಲಮಾವರಿಸುವ ಧೂಮರೇಖೆಯೊಡಂಬೆರದ ಕಾಷ್ಠಾಗ್ನಿಗೆ ಪೊತ್ತಿಕ್ಕಿದಂ. ನೋಟಕರೆಲ್ಲರುಂ ಹಾಯೆಂದೊರಲು ತಿರ್ದರ್. ಪಸುಗಳುಂ ಕಣ್ಣೀರ್ಸುಂಬಿದುವು. ಲತಾವೃಕ್ಷಂಗಳುಂ ಗಾಳಿ ಗೊಲೆವ ನೆವದಿಂ "ಮಾಣ್ ಮಾಣ್" ಎನುತಿರ್ದುವು.

ಆಗಳ್ ರಾಧೆ—ಎಲೆ ಚಾರರೆ! ನೀಮಾಗಳೆ ಪೋಗಿ ಎನ್ನೆರೆಯ ನೊಳ್ ನಿನ್ನ ಉಪಕಾರದಿಂ ಏನುಮರಿಯದ ಚಂದ್ರಾವಳಿಗೆ ಇಂತುಟ

ವಸ್ಥೆಯಾಯ್ತು, ಎಂದು ಕಂಡುದನುಸಿರ್ದು ತಂಗೆಯ ಮರುಕಮಂ ಸೈಸದೆ ರಾಧೆಯುವಾಕೆಯ ಗತಿಯನೆ ಪೊರ್ದಿದಳ್, ನಿನ್ನ ಕೀರ್ತಿಯದು ಲೋಕದೊಳೆತ್ತಲುಂ ಪಬ್ಬುಗೆ, ಎಂದೆನ್ನ ನುಡಿಯನೆ ಪೇಳಿಂ (ಎಂದ ವರನಟ್ಟಿ (ತನ್ನೊಳೆ) ಹಾ! ಆಂ ಬಂದುದಕೆ ತಂಗೆಯ ಸಾವಂ ನೋಳ್ಪುದೇ ಫಲವಾಯ್ತು, ಅಂತುಮಲ್ಲದೆ ಗೋಪಾಲನಾಥಂ ಎನ್ನ ರೂಪದಿನೇ ಈಕೆಯಂ ಒಡಂಗೂಡಿದ ಕತದಿಂ ಎಲ್ಲರುಂ ತಂಗೆಯಂ ಕೊಂದಳೆಂದೆನ್ನಂ ಬೈವರ್. ಮೇಣುಂ ಒಡವುಟ್ಟಿದಳ ಅಳಿವಂ ಕಾಣ್ಬು ದೆಂತು? (ಎಂದೆಣಿಸಿ, ನೋಳ್ಪರೆಲ್ಲರುಂ, ಅಬ್ಬಾ ಇವರ ಬಾಂಧವ್ಯದ ಪ್ರೇಮಮೆ! ಎಂದು ಮರುಗುತೆ ಕೊಂಡಾಡುತಿರಲ್, ಆಜ್ವಾಲಾಮ ಧ್ಯಕೆ ಓಡಿ ಲಾಗಿಸಿದಳ್.)

ಆಗಳ್! ಕಾಷ್ಠಾಂತರದೊಳ್ 'ಹಾ ಕೃಷ್ಣ ಕೃಷ್ಣ!' ಚಂದನ ಬಾ ಯೊಳ್ 'ಹುಂ ದುಷ್ಟೆ ದುಷ್ಟೆ!' ನೋಟಕರ ನುಡಿಯೊಳ್ 'ಅಹೋ ಕಷ್ಟಂ ಕಷ್ಟಂ'. ಇಂತೊಂದು ಕೋಲಾಹಲಂ ದಿಗಂತವಿಶ್ರಾಂತವಾಗು ತ್ತಿರೆ, ಮುತ್ತಿದ ಧೂಮರೇಖೆಯೆಲ್ಲಂ ಸೂರ್ಯೋದಯದೊಳ್ ಮಾಯ ಮಪ್ಪ ಕತ್ತಲೆಯಂತೆ ಎತ್ತೆತ್ತನೊ ಪರಿಯಲ್ ಅನಾಥಪ್ರಿಯಂ ಮುರಳೀ ಧರಂ, ಶ್ರೀ ಕೃಷ್ಣಂ, ಆ ಜ್ವಾಲಾಮಧ್ಯದೊಳ್ ನರಲ್ವ ರಾಧಾಚಂದ್ರಾ ವಳಿಯರ ನಡುವೆ ಬಂದು ನೆಲಸಿದೊಂದಚ್ಚರಿ ಕಾಣಲಾದತ್ತರೆನಿಪಿಸ ದೊಳ್. ಕಾಷ್ಠಾಗ್ನಿಯ ತೇಜಮುಂ ಮಾಣಿಕಪೀಠದ ಕಾಂತಿಯಂ ಪೋ ಲ್ವುದು. ಬಳಿಯಂ, ಯಶೋದಾಸುತಂ, ಇರ್ವರ ಕೆದರ್ದ ಬಟ್ಟೆಗಳಂ ಸರಿಗೈದು ಕಣ್ಣೀರನೊರಸಿ, ಹಾ "ಈ ಬಾಲೆಯ ಮೆಯ್ಯಗಾಯಮನುಂ ಬೆಂಕಿಯುರಿಯಂ ಸೈಸದೆ ನರಲ್ವುದನುಂ ಕಂಡೊಡೆ, ಬಸಿರ್ಗೆ ಕತ್ತಿ ಯಂ ಹಾಯ್ಕಿದಂತಕ್ಕುಂ. ಎನ್ನಂ ತ್ರಿಕರಣಪೂರ್ವಕಂ ನಂಬಿದರ್ಗೆ ಒದವಿದ ಸುಖದುಃಖಂಗಳೆಲ್ಲವುಮೆನಗಲ್ತೆ? ' ಹುಂ, 'ಸತ್ತ ಎಮ್ಮೆಯ ಪಾಲಂ ಬಣ್ಣಿಪುದೇಕೆ?' ಎಂಬಂತೆ ಕಳೆದುದಂ ನೆನೆದು ಗುಣಮಿಲ್ಲಂ." ಎಂದಮೃತಹಸ್ತದಿಂ ತಡವರಿಸೆ ಗಾಯದ ಬೇನೆಯುಂ ಬೆಂಕಿಯುರಿಯು ಮೆಲ್ಲಂ ಬಿರುಗಾಳಿಯ ದೀಪಮಾಯ್ತು.

ಬಳಿಯಂ ಬೆರಗಿಂ ಕಣ್ವಿಟ್ಟು ನೋಳ್ಪ ಚಂದ್ರಾದ್ಯರೊಳುಂ ನೋಟ ಕರೊಳಂ, ಕಡೆಗಣ್ಣನೊಯ್ಯನೆ ಪರಪಿ ರಾಧೆಯ ಮೊಗಮಂ ನೋಡಿ ನಕ್ಕು,

ಕೃಷ್ಣ ೦—"ಎಲೆ ಕಾಂತೆ! ನೀನೆನ್ನಂದಂಗಳನೆಲ್ಲಮಂ ಒರೆದು ಪರೀಕ್ಷಿಸಿದ ಪ್ರೌಢೆಯಲ್ತೆ? ಇವಳಿನ್ನುಂ ಮುಗ್ಧೆ, ಅದರಿನೇನೇನೋ ಬಗೆ ವಳ್" ಎಂದು ಚಂದ್ರಾವಳಿಯ ನೀಕ್ಷಿಸಿ,

ಓ ಎನ್ನ ಸಂತಸದ ಕಣಿ! ಎನ್ನ ಕೊರಲ ಮಣಿಮಾಲೆ! ಎನ್ನ ಸವಿನುಡಿ ಬೊಂಬೆ! ಒರ್ವರ್ಗಿನಿಸುಮಪರಾಧಂಗೆಯ್ದಂ, ಇನ್ನಿದನೆಕೊಂಡು ಮೂದಲಿಸಿ ಮೂಗಿನ ಬಳ್ಳಿಯಂ ಪಿಡಿದ ಗೋಪತಿಯವಸ್ಥೆಯಂ ಎನಗು ಮೊದವಿಸದಿರ್" ಎಂದು ಕಿವಿಯೊಳ್ ಪೇಳ್ದು, ಬಳಿಯಂ ನಸುನಗುತೆ "ಕಷ್ಟಸುಖಂಗಳ್ ಇರುಳ್ಪಗಲ್ಗಳಂತಿರ್ಪುವು, ಅದರಿಂ, ನಿನ್ನ ಅವಗಡದ ದುಃಖಂ ಪರಿದುದು ಇನ್ನೇನುಂ ಭಯಮಿಲ್ಲಂ" ಎಂದು ಸಂತಯಿಸಿದಂ.

ರಾಧೆ—ಓ ಎನ್ನ ಸೌಭಾಗ್ಯನಿಧಿ! ತಂಗೆಯ ಈಯವಸ್ಥೆಯಂ ಕಂಡು ಸೈಸದೆ ಅರಿಕೆಯೆಲ್ಲಂ ಮಾಸೆ, ನಿನ್ನೆಡೆಗೆ ದೂಷಿಸಿ ಆಳ್ಗಳಂ ಕಳುಪಿರ್ಪೆಂ. ಆ ತಪ್ಪನೆಳ್ಳಿನಿತನಾದೊಡಂ ಮನದೊಳಿಡದಿರ್.

ಕೃಷ್ಣ ೦—ಅಂತೆನದಿರ್, ಪೆಣ್ಗಳಂ ಪೊರೆವ ಭಾರಂ ಪುರುಷರದಾ ಗಿರೆ ನಿನ್ನೊಳೇಂ? ಇಲ್ಲಿ ಕಷ್ಟಂಬಡುವ ನಿಮ್ಮಂ ಮರೆತು, ಸೊರ್ಕಿದಾನೆ ಯಂತೆ ತಿರುಗುತಿರ್ದ ಎನ್ನದೆ ಅಪರಾಧಂ.

ರಾಧೆ—ಅಮೃತದೊಳ್ ಕೈಪೆಗೆ ಇನಿಸುಮೆಡೆಯಿರದಂತೆ ನಿನ್ನೊ ಳ್ ತಪ್ಪಿನ ಉಂಗುಟಕುಮೆಡೆಯಿರ್ಕುಮೆ? ಇದೆಲ್ಲಂ ನಿನ್ನ ನಾಟಕದ ಒಂದೊಂದಂಕಮಲ್ಲದೆ ಬೇರೇಂ?

ಅನ್ನೆಗಮಾಗಸದತ್ತಣಿಂ "ಹರಿ ಹರಿ" ಎಂದು ಶ್ರೀ ಕೃಷ್ಣನ ನಾಮ ಸಂಕೀರ್ತನೆಯಂ ತನ್ನ ಬೃಹತಿಯೆಂಬ ಬೀಣೆಯಿಂ ಸ್ವರರಾಗತಾಳಲಯ ಮೂರ್ಛನಾದಿಯಾದ ಪಾಡನರಿತು ನುಡಿಸುತುಂ ಪಾಡುತುಂ ಇಳಿತಂದ

ನಾರದನಂ ಕಂಡಾವಮಾಧವಂ, ರತ್ನಾಸನದಿಂದೆಂತಂತೆವೊಲ್ ಕಾಷ್ಠಾಂತರದಿಂ ರಾಧಾಚಂದ್ರಾವಳಿಯರೊಡನೆಳೆದು, ವಂದಿಸೆ "ಗೋವಿಂದ" ಎಂದು ಇನಿಸುಂತೊಲಗಿ ಪೊಡಮಟ್ಟೆ ಆ ರುಷಿಯಂ ತೆಗೆದಪ್ಪಿ, ಬಳಿಯಂ ಬೀಣೆಯಂ ಬಾಜಿಸದೆ, ಮನದೊಳೆ ಹರಿಸ್ಮರಣೆಗೈವುತೆ ಕೈವೆರಲನೆಣಿಪನೊಳಾ ವಾಸುದೇವಂ—"ಇದೇಂ ಕೊಂಡೆವೇಳ್ದುದು ಎನಿತ್ತಾದುದೆಂದು ಲೆಕ್ಕಂಗೆಯ್ವುದೆ?"

ನಾರದಂ—(ನಕ್ಕು) ಇದೀಗಳ್ "ತಾಂಕಳ್ಳನಾದೊಡೆ ಪೆರರಂ ನಂಬಂ" ಎಂಬುದರ್ಕೆ ದೃಷ್ಟಾಂತಂ. ಹರಿಸ್ಮರಣೆಯಂ ಮಾಳ್ಪ ಈ ನಾಲಗೆ ಇನ್ನೆವರಂ ಪುಸಿಯುಸಿರ್ದುದಿಲ್ಲವೆಂದು ಕಾಯಿಸಿದ ಗುಂಡನಾದೊಡಂ ಪಿಡಿವೆಂ. ಸತ್ಯಮನೆಂದೊಡಂ ಪಿಸುಣಾಡಿದಂತಾಯ್ತೆ? ಆ ನುಡಿಯಂತೆ ಪೋಕೆ, ತಪೋನಿಧಿಗಳಂತೆಲ್ಲಂ ದುರ್ಮಾರ್ಗದೊಳಡಿಯಿಡರ್.

ಕೃಷ್ಣಂ—(ನಗುತೆ) ಓ ತಪೋನಿಧಿಯೆ! ನಿನ್ನ ತಪದ ಬಲ್ಮೆಯಂ ಪೆಣ್ಣೊಳ್ ತೋರಿ ಸಾರ್ಥಕಂಗೆಯ್ದೆಯಲ್ತೆ? ಮಾನ್ಯಮಂ, ಪುನೀತಂ, ಪುಣ್ಯವಂತಂ, ಎನಿಸಂ ಪೊಗಳ್ದೊಡಂ ನಿನ್ನ ಗುಣದ ಕುಡಿ, ಆ ಹನೂಮಂತನ ಬಾಲದ ಕುಡಿಯೆ ನಿಜಂ. ಬಲ್ ಬಲ್.

ನಾರದಂ—ಏಂ! ತಪದ ಬಲ್ಮೆಯಂ ಪೆಣ್ಣೊಳ್ ತೋರ್ದೆನೆ? ಇಂತುಸಿರಲ್ ನಿನಗೆ ನಾಲಗೆವಂದುದೆ! ಆಂ ಮನೋವಾಕ್ಕಾಯಂಗಳೊಳುಂ ಪೆಣ್ಗಳೊಳ್ ಕವಲೆಣಿಸಿದುದಿಲ್ಲಂ, ಹುಂ ತನ್ನನೆ ಪಳುಕಿನ ಕನ್ನಡಿಯೊಳುಂ ಕಾಣ್ಬಂತೆ ನಿನಗೆ ಪೆರರೊಳುಂ ತನ್ನವಸ್ಥೆಯೆ ಕಾಣ್ಗುಂ; ಇರ್ಕೆ, ಎನ್ನೊಳದೇಂ ತಪ್ಪಿತಂ?

ಕೃಷ್ಣಂ—ಪರಿಹಾಸ್ಯಂ ಸಾಲ್ಗುಂ, ಪ್ರಯೋಜನಮಿಲ್ಲದೆ ಅಪ್ಪನೆಡೆಗೈದಿ ಏನೇನೋ ಬಿತ್ತರಿಸಿ ಅಬಲೆಗೆ ಈಯವಸ್ಥೆಯನೊದವಿಸಿದುದೇ ತಪ್ಪಿತಂ.

ನಾರದಂ—ವ್ರತಿಗಳ್ ಸ್ವಪ್ರಯೋಜನಕಾರ್ಯಮಂ ಮಾಳ್ಪರಲ್ಲೆಂಬುದಂ ನೀನಿನ್ನುಮರಿಯೆಯ?

ಕೃಷ್ಣಂ—ನಿನ್ನ ನುಡಿಯೆಂದೊಡಿದು "ಬೀಳದ ಸೆನ್ನೆ" ಹುಂ ಸಾಲ್ಗುಂ, ಆನಿಂತುಟುಗೆಯ್ದುದೇಕೆಂದು ನೀನರಿತಿರ್ಪೆಯು?

ನಾರದಂ—ಅರಿಯಲದೇಂ ಬಹ್ಮವಿದ್ಯೆಯೆ? ನಿನ್ನ ಬಿರುದೆಂಬುದಂ ಮುಪ್ಪೊಳಲೇ ತಿಳಿಸುಗುಂ.

ಕೃಷ್ಣಂ—ಚೀ: ಡೊಂಕುನುಡಿಯನೆತ್ತದಿರ್.

ನಾರದಂ—ಅಂತಾಡೊಡೆ ಸ್ತುತಿನ ನುಡಿಯಾವುದು?

ಕೃಷ್ಣಂ—ನೀಂ ಕೇಳ್ವೊಡೆ ಕಿವಿಯೇ ಅಧಿಕಾರಿಯಾಗಿರ್ಕೆ.

ನಾರದಂ—ಕಿವಿಯೇ ಅಧಿಕಮಪ್ಪ ಅರಿಯಾದೊಡೆ ಅವಂ ಬಧಿರ ನೆನಿಪ್ಪಂ, ಅದರಿಂ ಕೇಳ್ವುದೆಂತು?

ಕೃಷ್ಣಂ—ಚೀ: ನಿನ್ನೊಳ್ ಮಾತಾಡಲೇ ಶ್ರಮಂ.

ನಾರದಂ—ಕಲ್ಲಂ ತಿಂದೊಡುಂ ಕರಗಿಸುವ ಪರಯುದವಂಗೆಯು ಶ್ರಮವಾದೊಡೆ ಪಳೆಮುದುಕನೆನ್ನಿರವೆಂತಿರಲ್ವೇಳ್ಕುಂ ?

ಕೃಷ್ಣಂ—ಸಾಲ್ಗುಂ ನಿನ್ನೊಳ್ ನುಡಿಯು ಸಮರ್ಥರ್? ನೀಂ ವಿಶ್ವತೋಮುಖನ ಮಗನಲ್ತೆ?

ನಾರದಂ—ಆಂ ವಿಶ್ವತೋಮುಖನ ಮಗಂ, ನೀನವಂಗು ಮಪ್ಪಂ, ಎನ್ನಜ್ಜಂ.

ಕೃಷ್ಣಂ—ಈಕಿರುವರಯುದವಂ ಚಣಮೊಂದರೊಳೆ ಪಳೆಮುದು ಕಂಗುವಜ್ಜನಾದನೆ? ನಾರದ! ಊರೂರಂ ತಿರುಗಿ ನಿನಗೀಗಳ್ ಪಿತ್ತ ಮೇರಿರ್ಕುಂ; ಅದರಿನೆ ಇಂತೆಲ್ಲಂ ಪೇಳ್ವೆ.

ನಾರದಂ—ಓ ಕೃತ್ಯಂಗಳಿನೇ ನಿನ್ನಂದುದು ವ್ಯಕ್ತಮಪ್ಪುದು.

ಕೃಷ್ಣಂ—ಆಯ್ತು ನಮಸ್ಕಾರಂ, ಅಧಿಕಪ್ರಸಂಗಿಯೊಳ್ ನುಡಿವುದೇಂ?

ನಾರದಂ—(ಯೋಚನೆಯಂ ನಟಿಸಿ) ಓ ಪರಾತ್ಪರ ಸ್ವರೂಪ! ಕೋಪಿಸದಿರ್, ನೀನಿಂತುಟು ಗೆಯ್ದುದೇಕೆಂದು ಈಗಳೆ ನೆನಂಬರಿಕೆಯಾಯ್ತು.

ಕೃಷ್ಣಂ — ಆದೊಡೇಕೆ? ಪೇಳ್ ತಿಳಿವೆಂ.

ನಾರದಂ — ನೀಂ ತಿಳಿಯುದುದಾವುದು? "ಚರ್ವಿತಚರ್ವಣದಂತೆ ತಿಳಿದುದನೆ ತಿಳಿದೊಡೇಂ ಪಳಂ? ಹುಂ ಇರ್ಕೆ ಪೇಳ್ವೆಂ, ನಿನಗೊಂದು ವಿಲಾಸಂ, ಎನಗೆ ಮರೆತ ನಿನ್ನ ನಾಟಕದ ಪುನರಾವೃತ್ತಿ, ಕೇಳ್ವರ್ಗೆ ಅಂತರ್ಯದ ಅಜ್ಞಾನಧ್ವಾಂತನಿವಾರಕಮಾದ ಸುಜ್ಞಾನದೀಪಿಕಾವರ್ತಿ."

ಕೃಷ್ಣಂ — ಹುಂ ಎಂತಾನುಮಕ್ಕೆ ಪೇಳ್.

ನಾರದಂ — ಪೇಳ್ವೆಂ, ಲೋಕದೊಳ್ ಪಾತಿವ್ರತ್ಯಮೆ ಜಗತ್ಪತಿಯಪ್ಪ ನಿನ್ನ ಒಲ್ಮೆಯಂ ಪೆಣ್ಗಳ್ಗೊದವಿಸುಗುಂ, ಅಂತಿರಲೀ ಬಾಲೆ ಚಂದ್ರಾವಳಿ ತನ್ನಕ್ಕನಂತಿರೆ ಸುಕೃತಶೇಷದಿಂ ನಿನ್ನನೆ ವಶೀಕರಿಸಿರ್ಪುದರಿಂ, ದಿನದೀಪದಂತಿರ್ಪ ಆ ಪಾತಿವ್ರತ್ಯದ ಬೆಸನಮೇಕೆಂದು ಸುಜ್ಞಾನಿಗಳ್ಗಂ, ಅನುಗುಣಮಿರದ ದಾಂಪತ್ಯಂಗೆಯ್ದೊಡೆ ತತ್ಫಲಮಿಂತು ವಿಪರೀತಮಾಗಿ ಪರಿಣಮಿಸುಗುಮೆಂದು ಸಾಮಾನ್ಯರ್ಗಂ, ಸೂಚಿಸಲ್ವೇಡಿ ಈತೆರನೆಸಗಿದೆಯಲ್ಲಮೆ? ಅಂತಾದೊಡುಂ ನಿನ್ನ ಯೋಚನೆಗೆ ಸಹಾಯಂಗೆಯ್ದ ಎನ್ನಂ ನೀನಿಂತು ದೂರಲಕ್ಕುಮೆ?

ಕೃಷ್ಣಂ — ನೀನೆನ್ನ ಆಶಯಕೆ ಸಹಾಯಂಗೆಯ್ದುದೆಂತೊ

ನಾರದಂ — ಅಂ ಸಂದನೊಳ್ ಪೇಳ್ದುದರಿನಲ್ತೆ ನಿನ್ನೆಣಿಕೆ ಇಳೆಯೊಳೆಲ್ಲಂ ಪಸರಿಸಿತು?

ಕೃಷ್ಣಂ — ಆಯ್ತಾಯ್ತು ಉತ್ತರಂ. ಮುಟ್ಟಿದುದು; ಇನ್ನಾಂ ನಿನ್ನ ಅಧೀನಂ.

ನಾರದಂ — ಅದೇಂ ಪೊಸತೆ? ಭಕ್ತಾಧೀನನೆಂಬುದು ನಿನಗನಾದಿಯ ಬಿರುದಲ್ತೆ? ಇದೋ ನಿನ್ನನೀವೀಣೆಯೊಳ್ ನಲಿಯಿಸುವೆಂ ನೋಡು ಎಂದು ಬಾಜಿಸಿ, ಪರಮಾನಂದಾಬ್ಧಿಯೊಳ್ ಅನಿಬರುಮಂ ಮುಳುಗಿಸಿದಂ.)

ಆ ಸಮಯದೊಳೆಲ್ಲರುಂ ಕೃಷ್ಣನ ವ್ಮೈಮೆಯನಚ್ಚರಿಯೆಂದು ಪೊಗಳ್ದರ್, ಚಂದನುಂ ಚಿತ್ರಾರ್ಪಿತನಂತಿರ್ದಂ. ಆಗಳ್ ಚಂದನೆಡೆಗೈತಂದಾನಾರದಂ—"ಎಲೆ ಚಂದ! ಇನ್ನಾನುಂ ಮರುಳ್ತನವುಂ ಬಿಡು, ಕೃಷ್ಣನಂ ನಾಡ ಗೋವಳನೆಂದೆಣಿಸದಿರ್; ಸಾಕ್ಷಾದ್ಭಗವಂತನ ಅವತಾರಿ ಕಣಾ! ಅಂತಲ್ಲದೊಡೆ ಉಂಡಾಡಿಗಳಪ್ಪ ಮೇಪಿನ ಮಕ್ಕಳ್ಗೆ ಈಯಮಾನುಷ ಕೃತ್ಯಂ ಸಾಧ್ಯಮೆ? ಭಕ್ತದ್ರೋಹಿಯಾದವಂ ಪರಮಾತ್ಮದ್ರೋಹಿಯುಮಪ್ಪನೆಂಬುದು ಸಿದ್ಧಾಂತಂ; ಆ ದೈವದ್ರೋಹಂ ಅಂಧಕೂಪಕೆ ನೇರಾಗಿ ಕರೆದುಯ್ವ ಮುಂದಾಳಕ್ಕುಂ, ಅದರಿಂ ಆ ಕೃಷ್ಣನ ಪ್ರೀತಿಗೆ ಈಡಾದ ಚಂದ್ರಾವಳಿಯೊಳ್ ಕೋಪಮುಂ ತೊರೆ, ಪಲವೇಂ? ದಿವ್ಯಸಹಸ್ರವತ್ಸರಂ ನಿರಾಹಾರದಿಂ ನಟ್ಟಡವಿಯೊಳ್ ತಪಂಗೆಯ್ವ ಯೋಗಿಗಳ ಮಾನಸಕುಂ ಅತ್ತಿಯ ಪೂವಾದ ಪರಮಹಂಸಂ ಏನೋ ಪೂರ್ವಪುಣ್ಯಲೇಶದಿಂ ಪ್ರತ್ಯಕ್ಷಮಾಗಿರಲ್ ಪಳ್ಳಿಯ ಕುರುಂಬನ ಕೈಗೆ ಮಾಣಿಕಮೊದವಿದಂತೆ ಮಾಡದಿರ್."

ಚಂದಂ — (ಆ ನುಡಿಗೇಳ್ದು ಕೃಷ್ಣಂ ಪರದೈವಮೆಂದು ದೃಢಮಾಗೆ) ಓ ಮುನೀಶ್ವರ! ಆನೀಗಳ್ ಕೃಷ್ಣಂಗೆರಗಲೆಂದವನ ಸನಿಯಕ್ಕೈದಿದೊಡೆ ಇನ್ನೆವರಂಗೈದ ಅಪರಾಧದೇಳ್ತರದಿಂ ದೀಪದೆಡೆಗೈದಿದ ಪತಂಗದಂತೆ ಆ ಅಪಾರಮಹಿಮನ ಕೋಪಾಗ್ನಿಗೆ ಆಹುತಿಯಾಗದಿರ್ಪೆನೆ? ಅದರಿನೆನ್ನಮನಂ ಅಲ್ಲೋಲಕಲ್ಲೋಲತರಂಗಂಗಳೊಳ್ ಅಲೆವ ದೋಣಿಯಂತಿರ್ಪುದು. ಮುಂದಣ ಉಪಾಯಮೇನೆಂದು ನಡನಡುಗುವ ಚಂದನೊಳ್.

ವಿರಿಂಚಾತ್ಮಜಂ — ಎಲೆ ಪುಚ್ಚ! "ಶರಣಂಗೆ ಮರಣಮಿಲ್ಲಂ" ಎಂಬ ನುಡಿಯುಂ ಲೋಕಮೆ ತಿಳಿದಿರ್ಕುಂ. ಅಂತಿರೆ ಜ್ಞಾನಸ್ವರೂಪಂ ಪರಮಾತ್ಮಂ ತಿಳಿಯನೆ? ಅದರಿಂ ಕೃಷ್ಣನ ಕೋಪಕೆ ಬೆದರ್ದಪೆನೆಂದು ನೀನೆಂದುದು ಗುಮ್ಮಂ ಬರ್ಕುಮೆಂದು ತಳ್ಳಂಕದಿಂ ಮುಸುಕಂ ಹಾಯ್ಕುವ ಮಕ್ಕಳ ಮೂಢತೆಯಂತಾಯ್ತು, ಒರ್ಮೆಗವಂ ಮುಳಿದೊಡೆ, ನೀಂದೂರ

ಮಿರ್ದೊಡುಮೇನುಳಿವರ್? ಏಂ ಪ್ರಳಯದೊಳ್ ಗವಿಯೊಳ್ ಅಡಗಲ್ ತೀರ್ಗುಮೆ? ಆಕತದಿಂ ಕವಲೆಣಿಸದೆ "ಸಹಸ್ರಾಪರಾಧಂ ಕ್ಷಮಸ್ವ" ಎಂದು ಶ್ರೀ ಕೃಷ್ಣನ ಚರಣಮಂ ಬಿಗಿವಿಡಿ.

ಚಂದಂ—"ಆಣತಿ" ಎಂದ್ಯೆದಿ ಮೈ ಕಂಪಿಸುತಿರೆ ಭಯಭಕ್ತಿ ಪುರಸ್ಸರಂ ಕಷ್ಣನಡಿದಾವರೆಗೆ ಮಣಿದಂ.

ಒಡನಾವಾಸುದೇವಂ ನಡನಡುಗುವ ಚಂದನಂ ಪಿಡಿದೆತ್ತಿ, ಚಂದ್ರಾವಳಿಯ ಮೊಗಮಂ ನೋಡಿ ನಸುನಗುತೆ, "ಎಲೆ ಚಂದ! ಇದೇಂ ಚಳಿ ಗಾಲಮೊ? ಏನಾನುಂ ಭೂತಾವೇಶಮೊ? ಇದೋ ಮೆಯ್ಯೊಳ್ ನಡುಕಂ ವಿಪರೀತಮಾಗಿರ್ಕುಂ.

ಚಂದಂ ಭಯಲಜ್ಜೆಗಳಿಂದುಸಿಕನಿರೆ.

ಕೃಷ್ಣಂ—"ಓ ಚಂದ್ರಾವಳಿ! ಏಂ ನಿನ್ನ ಗಂಡಂಗೀಪರಿಯ ರೋಗಮೇನಾನುಮಿರ್ಪುದೆ? ಇದೋ ಮೆಯ್ಯೊಳ್ ಕಂಪಂ, ಬಾಯೊಳ್ ಮೂಕತೆ" ಎಂದು ಕೈಮುಟ್ಟಿ ಕೇಳೆ.

ಚಂದ್ರಾ—ಕೃಷ್ಣಸ್ಪರ್ಶನದಿಂ ಕಂಪಮಾಂತು ಲಜ್ಜೆಯಿಂ ತಲೆ ವಾಗಿ ಮಾತಾಡದಿರ್ದಳ್.

ಕೃಷ್ಣಂ—(ದರಹಾಸದಿಂ) ಇನ್ನೆವರಮರಿಯದಾದೆಂ, ಓ ಈ ಗಂಡ ಪೆಂಡಿರ್ ಏನೆರಕಮುಳ್ಳವರೊ! ರೋಗದೊಳುಂ ಗಂಡಂಗಿರ್ಪುದೆ ಪೆಂಡತಿಗುಂ. (ಎಂದಿನಿಸುಂ ನಕ್ಕು) ಎಲೆ ಬ್ರಹ್ಮಾತ್ಮಜ! ನೀನೀಚಂದನೊಳ್ ಏನೋ ಕರ್ಣಮಂತ್ರಂಗೆಯ್ದುದನುಂ, ಇವಂ ಬಂದು ಮಣಿದುದನುಂ, ಈಗಳ್ ಕಂಪಿಸುತೆ ಮೂಕನಾಗಿರ್ಪುದನುಂ ಕಾಣ್ಬೆಂ. ಇದೇಂ ರೋಗಮೊ? ನಿನ್ನ ಮಂತ್ರದ ಬಲ್ಮೆಯೊ?

ನಾರದಂ—ರೋಗಮೆ.

ಕೃಷ್ಣಂ—ಅದೇಂ ರೋಗಂ?

ನಾರದಂ—ಅದೇ ನೆಗಳ್ತೆವಡೆದ ಭಯಜ್ವರಂ.

ಕೃಷ್ಣಂ—ಆದೊಡೆ ಈ ಜ್ವರಕೆ ನಿದಾನಮಾವುದು?

ನಾರದಂ—ನೀನೇ ನಿದಾನಮಾಗಿ ಪ್ರಶ್ನಂಗೈವುದೆ?

ಕೃಷ್ಣಂ—ಅದಾನೆಂತು ನಿದಾನಂ?

ನಾರದಂ—ಪೆಂಡತಿಯಪ್ಪ ಚಂದ್ರಾವಳಿಯನಿವಂ ಬನ್ನಂಬಡಿಸಿದ ಕಾರಣದಿಂ.

ಕೃಷ್ಣಂ—ಓ ಅರಿತೆನರಿತೆಂ, ಗಂಡವೆಂಡಿರೆನೆ ಅನ್ಯೋನ್ಯಪ್ರೇಮದಿಂ ಒಳ್ದಾರಿಯೊಳ್ ನಡೆಯಲಿಪ್ಪವರ್, ಅಂತಿರೆ ಪೆಂಡತಿಯನರ್ಧಾಂಗಿಯಂ ಶಿಕ್ಷಿಸಲ್ ಗಂಡನೆಂತು ಸಮರ್ಥಂ? ಅನುಚಿತಕೃತ್ಯಮಂಗೈದುದರಿನೆ ಇಂತು ಬೆದರಲ್ ಕಾರಣಮಾಯ್ತು.

ನಾರದಂ—(ನಕ್ಕು) ಅಂತಾದೊಡೆ ಪೆಂಡತಿಯಂ ಶಿಕ್ಷಿಸಲುಮಾಗದು; ಅವಳಂ ಸನ್ಮಾರ್ಗದೊಳ್ ನಡೆಯಿಸಲ್ ತಾನಶಕ್ತನಾದೊಡೆ, ಆಕೆಯ ಸ್ವೇಚ್ಛಾವೃತ್ತಿಯಂ ಕಂಡುಂ ಕಂಡುಂ ಆಗಂಡಂ ಷಂಡನಂತೆ ಕಣ್‌ಕಣ್ ಬಿಡುವುದೊ? ಪ್ರಾಣಂ ಬಿಡುವುದೊ?

ಕೃಷ್ಣಂ—ಅದರ್ಕೆಯೆ ಪೇಳ್ದೆಂ, ಸಮಾನರೂಪಾದಿಗುಣಮುಳ್ಳರ್ಗೆಯೆ ಬಾಂಧವ್ಯಂಗೈಯಲ್ವೇಳ್ಕುಮೆಂದು.

ಅನಿತರೊಳ್ ಚಂದನ ಮೊಗದಿಂ "ಸಹಸ್ರಾಪರಾಧಂ ಕ್ಷಮಸ್ವ" ಎಂಬೊಂದು ವಾಕ್ಯಂ ಪೊರಟುದು.

ಕೃಷ್ಣಂ—ಚಂದ! ನಿನ್ನೊಳೆನಗೇನುಂ ಕೋಪಮಿಲ್ಲಂ; ಆದೊಡೆ ಎನ್ನ ಶರಣರ ಕಷ್ಟಸುಖಂಗಳೆರಡುಮೆನ್ನನೆ ಪೊರ್ದುಗುಂ, ಅದರಿಂ ಒವೆರ್ಗೆ ಇಂತೆಲ್ಲಂ ಗಲಬೆಗೆಡೆಯಾಯ್ತು.

ಚಂದಂ—ದೇವ! ಜಗತ್ಪತಿಯೇ ನೀನಾಗಿರಲ್ ಎಮ್ಮನ್ನರಪ್ಪ ತೃಣಪ್ರಾಯರ್ಗೆ ಈ ಪರಿಯೊಳ್ ಭಕ್ತರಂ ಪೀಡಿಪ ಬುದ್ಧಿಯನಿತ್ತುಂ ಎಮ್ಮೊಳೆ ಮುನಿಸಾದೊಡೆ ಕಷ್ಟಂ.

ಕೃಷ್ಣಂ—(ನಸುನಕ್ಕು) ಸಂದೆಯಮೊಪ್ಪಿತಂ (ಎಂದು ನಾರದಂಗೆ ಸನ್ನೆ ಗೈಯೆ)

ನಾರದಂ—ಚಂದ! ಇವಂ ವಿಶ್ವಾಧೀಶನಾದೊಡುಂ ಕೂಟಸ್ಥನಾಗಿರ್ಪಂ. ಜನರಂ ಸನ್ಮಾರ್ಗದೊಳ್ ವಿದ್ಯೆಯುಂ, ದುರ್ಮಾರ್ಗದೊಳ್ ಅವಿದ್ಯೆಯುಂ, ಎಂಬ ಮಾಯೆಯೇ ನಡೆಯಿಸುವಳ್. ಕಡೆಗೆ ನ್ಯಾಯಸ್ಥಾನದೊಳ್ ವಿಧಿಯುಂ ವಿಧಿಸುವ ನ್ಯಾಯಾಧಿಕಾರಿಯಂತೆ ಮಾಡಿದ ಪುಣ್ಯಪಾಪಂಗಳ್ಗೆ ತಕ್ಕುದೆನಿಪ್ಪ ಫಲಮಾತ್ರಮಂ "ದೈವಂ ಮಾನುಷ ರೂಪೇಣ" ಎಂಬಂತೆ ಇಂತೊಂದೊಂದು ಅವತಾರಂದಳೆದುಂ ಪಲವುಂ ಪರಿಯಿನುಂ ಕೈಗೊಳಿಸುವಂ.

ಕೃಷ್ಣಂ—ಈ ನಾರದಂಗೇನುಂ ಕೆಲಸವಿಲ್ಲಂ. ಎಂತೆಂತೋ ಪೊಗಳ್ವಂ, ಹುಂ, ಮುನಿವಚನಮನತಿಗಳೆವುದೇಕೆ? ಅದಿರ್ಕೆ, ದೈವದೊಲ್ಮೆಯಿಂ ಸುಜ್ಞಾನಿಯಾದೆ, ನೀನಿನ್ನು ಭಾರ್ಯಾಯುತನಾಗಿಯೆ ಬಾಳಯ್.

ತದನಂತರಂ, ನಾರದಂ ಕೃಷ್ಣನಾಜ್ಞೆಯಂ ತಳೆದು ಚಂದಾದ್ಯರಂ ಪರಸಿ ತಳರ್ದಂ.

ಶ್ರೀ ಕೃಷ್ಣನುಂ, ಒಡನೈತರ್ಪನೆಂದು ಅಳುವ ಚಂದ್ರಾವಳಿಯ ಬಾಷ್ಪಾಶ್ರುವನೊರಸಿ, "ಎಲೆ ಪೆಣ್ಮಣಿ! ಚಲವಿಡಿಯದಿರ್ ನಿನ್ನಂ ಕರೆದೊಯ್ದು ಶರಣನಪ್ಪ ಚಂದಂಗೆ ಮನಃಕ್ಲೇಶಮಂ ಗೈವುದೇನೆನಗೊಪ್ಪಿತಂ? ನಿನ್ನರಸನೀಗಳ್ ಪರಮಜ್ಞಾನಿಯಾಗಿರ್ಪಂ; ಒರ್ಮೆಗೆ ಭಿನ್ನಾಶಯಮಂ ತಳೆದೊಡೆ ಎನ್ನಂ ನೆನೆ, ಪಲವೇಂ? ನಿನಗಾವುದರ್ಕಂ ತೊಡರಿಲ್ಲದಂತೆ ಅಭೀಷ್ಟಮಂ ಕೈಗೊಳಿಸುವೆಂ" ಎಂದಾಕೆಯನೆಂತಾನುಂ ಸಂತಯಿಸಿ, ಚಂದಾದಿಗಳಂ ಬುದ್ಧಿವೇಳ್ದು ಮನ್ನಿಸಿ ರಾಧೆಯೊಡನಲ್ಲಿಂ ಗೋಕುಲಕ್ಕೈದಿದಂ.

ಅನಿತರೊಳಾ ದೂತರೈದಿ ಕೃಷ್ಣನನೆತ್ತಲುಂ ಕಾಣದೆ, ರಾಧೆಯೊಂದುದನೆಲ್ಲಂ ನಂದನೊಳ್ ಬಿತ್ತರಿಸಿದರ್.

ನಂದಂ—ಆ ನುಡಿಗೇಳ್ದು, ಉರಿಯುಂ ಮರುಕಮುಮೊಡನೆ ತಲೆ ದೋರೆ, "ಆಃ ಪುತ್ರನಿವಂ ಪೆರವೆಣ್ಗಳಂ ಕಿಡಿಸುವುದಲ್ಲದೆ ಅವರ ಪ್ರಾಣ ಹಾನಿಗುಂ ಕಾರಣಮಾದನೆ!"

ಹಾ! 'ಗೋಡೆ ಬೀಳ್ವೊಡೆ ಜಗಲಿಯೊಳೆ' ಎಂಬ ನಾಣ್ನುಡಿಯಂತೆ ವೊಲ್ ನಂದನಣುಗಂ ಇಂತೆಸಗಿದನಂತೆಸಗಿದನೆಂಬ ಲೋಕಾಪವಾದದ ಸಹಸ್ರನಾಮಮೆನ್ನನೆ ಪೊರ್ದುಗುಮಲ್ತೆ? ಏಗೆಯ್ವೆಂ, ಧರಣಿಯೊಳಿನ್ನಾರುಂ ಮಕ್ಕಳಿಂದಾನಂದಮಂ ತಳೆಯಲೆಣಿಪರ್ ಈ ನಂದನಂ ನೋಡಿ ಮರೆಗೆ. ಈಪರಿಯ ದುರ್ಮತಿಯುಱಿಸಲ್ ಆನಾರ ಮಕ್ಕಳೊಳ್ ಬೇದಮನೆ ಣಿಸಿದೆನೊ? ಇಂತಪ್ಪ ದುಷ್ಪುತ್ರರಿರ್ದೊಡುಂ ಇರದಂತೆಯೆ; ಅದರಿಂ ಜೀವದ ಪೆಣನಿವನಂ ನೋಡಲ್ 'ಕಾಶೀಲಿಂಗಾಪಹಾರೇಣ ಜ್ಯೇಷ್ಠ ಪುತ್ರೋ ಮ್ರಿಯತೇ ಧ್ರುವಂ' ಎಂಬಂತೆವೊಲ್ ಆವ ಶಿವಲಿಂಗಮನಪಹರಿಸಲ್ ಇಚ್ಛೈಸಿದೆನೊ?" ಎಂದು ಪಲವುಂ ಬಗೆಯೊಳ್ ಚಿಂತಿಸುತಿರ್ದಂ.

ಭಾರತಿ—ರಮಣ! ಕಾಶೀಲಿಂಗಮನಾರಪಹರಿಸಲಿಚ್ಛೈಸಿದಂ? ಜ್ಯೇಷ್ಠಪುತ್ರಂಗೆ ಸಾವೆಂತಾಯ್ತು?

ಕಬ್ಬಿಗಸಿಂಗರಂ—ಕೇಳೆನ್ನರಸಿರನ್ನೆ! ಈ ನೆಲದೊಳ್ ಮೊದ ಲೊರ್ವಂ ಎಪ್ರಂ ಪಲವುಂ ದೇಸಂಗಳಂ ತಿರುಗಿ ಕಡೆಗೆ ಕಾಶಿಗೈದಿ ಗಂಗಾಸ್ನಾನಪೂರ್ವಕಂ ವಿಶ್ವನಾಥದರ್ಶನಂಗೈದು, ಸುಪ್ರಸಾದಮನಾಂತು ಸುಲಕ್ಷಣದೊಂದು ಶಿವಲಿಂಗಮನುಂ ಕೊಂಡು ತನ್ನೂರ್ಗೆ, ತಿರುಗಿದಂ. ಅಂತು ಪೊರಟು ಒಂದಗ್ರಹಾರದೆಡೆಗೆ ಬರ್ಪಾಗಳ್ ಕತ್ತಲೆಯಾಯ್ತು ಬಳಿಯಂ ಇನ್ನೊರ್ವನೆ ಪೋಪುದನುಚಿತಂ, ಹುಂ ಸನಿಯದೊಳ್ ವಿಪ್ರಾಲಯಮಿರ್ಕುಮಲ್ತೆ? ಎಂದು ಧೈರ್ಯದಿಂ ದ್ವಿಜನೊರ್ವನ ಮನೆಗೆ ಆ ಯಾತ್ರಿಕಂ ಶಿವಶಿವ ಹರಹರೇತ್ಯಾದಿಸ್ಮರಣಮುಖಂ ಪೊಕ್ಕಂ.

ಅಂತು ಅಂಗಳಮಂ ಪೊಕ್ಕು ಬರ್ಪ ಭೂಸುರನಂ ಕಂಡಾನರ ಭಕ್ಷಕಸ್ವರೂಪಂ ಮನೆಯವಂ "ಆಃ ರುದ್ರಾಕ್ಷಿಯ, ತ್ರಿಪುಂಡ್ರದ, ಶಿವ ಸ್ಮರಣೆಯ, ಅಶನಧ್ವಂಸಿಯ ಅವತಾರಮೆ! ಇಂತಪ್ಪ ರಾವಣಸನ್ಯಾಸಿಗಳ್

ಈಗಳ್ ಪಲಂಬರ್, ಹುಂ ತಕ್ಕುದನೆಂತಾನುಂ ಮಾಳ್ಪೆಂ" ಎಂದೆಣಿಸಿ, ಬಂದ ವನಂ ಜೇಂನುಡಿಯಿಂ ಮನ್ನಿಸಿ ಕುಶಲಮನುಂ ಆಗಮದಂದಮನುಂ ತಿಳಿದು, ಬಳಿಯಂ ರಾತ್ರಿಯೊಳ್ ಭೋಜನಾನಂತರಂ ಅವನೊಳ್ ಲಿಂಗ ಮಿರ್ಪುದನುಂ ಅದರ ಮೈಮೆಯನುಂ ಆತನೊಳೆ ಕೇಳ್ದರಿತು, (ತನ್ನೊಳೆ ತಾಂ)—ಈ ಲಿಂಗಮನಪಹರಿಸಿ ಅನ್ನದ ನಷ್ಟಮಂ ಕಳೆಯಲ್ವೇಳ್ಕುಂ; ಏಗೆಯ್ವೆಂ? ಕೇಳ್ದೊಡೆ ಕುಡಂ, ಇರ್ಕೆ ನೋಳ್ಪೆನೆಂದೆಣಿಸಿ.

"ಎಲೆ ಭೂದೇವ! ನೀಂನಡೆದು ಬಲ್ದಣಿದೆ ಅದರಿಂ ನಿದ್ರಿಸು" ಎಂದು ಜಗಲಿಯೊಳ್ ಬಿತ್ತಿವದಿಯೊಳ್ ಪಾಸಿಗೆಯಂ ಬಿರ್ಚಿಕೊಟ್ಟು ತಾನುಂ ಪವಡಿಸಲೆಂದು ಮಾಳಿಗೆಗೈದಿದಂ.

ಇವನೇಂ ಮನೆಯವಂ ಗೋಮುಖವ್ಯಾಘ್ರನೆಂಬುದನರಿತಿರ್ದನೆ? "ಹರ ಹರ" ಎಂದು ಪವಡಿಸಿದಂ.

ಈತಂ ಮಲಗಿದೆಡೆಗೆ ನೇರಾಗಿ ಕರುವಾಡದೊಳ್ ಗೃಹಸ್ಥನುಂ ಲಿಂಗದೊಳಾಸೆಯಿಂ ತಾನೆಂತಾನುಂ ಕೊಂಡುಪೋದ ಪೊರಲಾರದ ಕಲ್ಲಂ ಗವಾಕ್ಷದೊಳ್ ಹಾಯ್ಕಿ ಯಾತ್ರಿಕಂಗೆ ಊರ್ಧ್ವಗತಿಯಂ ತೋರಲ್ ಕಾಯ್ದಿರ್ದಂ. ವಿಧಿವಿಳಸನಮನೇನೆಂಬೆಂ? ಆ ಸಮಯದೊಳಾಯುರ್ಬ ಲದ ಏಳ್ತರದಿಂ ಮಲಗಿದೆಡೆಯೊಳ್ ಇರುಂಪೆಗಳ್ ಸಾಲ್ಗಟ್ಟಿವರೆ ಯಾತ್ರಿ ಕಂ ಮೆಲ್ಲನಲ್ಲಿಂದೇಳ್ದು ಬೇರೊಂದೆಡೆಯೊಳ್ ನಿದ್ರಿಸಿದಂ.

ತದನಂತರಮಾಗೃಹಸ್ಥನ ಜ್ಯೇಷ್ಠಪುತ್ರಂ ಎತ್ತವೋ ಪೋದವ ನೈತಂದು ನಿದ್ರಾಭರದಿಂ, ಆ ಬ್ರಾಹ್ಮಣಂ ಮುನ್ನಂ ಪವಡಿಸಿದ ಇರ್ಕೆ ಯೊಳೆ ಮೃತ್ಯುಪಾಶದ ಬಲಾತ್ಕಾರದಿನೆಂಬಂತೆವೋಲ್ ಶಯನಂಗೈದಂ.

ಬಳಿಯಂ ನಡುವಿರುಳಾಗೆ ಎಲ್ಲರುಂ ನಿದ್ರಾಲಿಂಗಿತರಾಗಿರಲ್ ಆ ಬ್ರಹ್ಮರಾಕ್ಷಸಸ್ವರೂಪಂ ಮಾಳಿಗೆಯಿಂ ಕಲ್ಲಂ ಹಾಯ್ಕಿದಂ.

ಮೇಣೇಂ? ಬ್ರಹ್ಮಹತ್ಯಾಪಾತಕಿಗೆ ಲಿಂಗಮುಂ ಸಿಂಗಿಯಕಣ್ಕು ಮೆಂಬಂತೆ ಮಗಂ ಕಣ್ಮುಚ್ಚಿದಂ.

ಬಳಿಯಂ ಕಿವಿಗೊಟ್ಟಾಲಿಸಿ ತನ್ನೊಳೆ ತಾಂ "ಹುಂ ನಿಶ್ಯಬ್ದಂ ನಿಶ್ಯಬ್ದಂ. ಬಲ್ ಬಲ್—ವಿಪ್ರಂಗೆ ಕಾಶೀಯಾತ್ರೆಯ ಫಲಂ ಕೈಲಾಸ ಮಾಯ್ತು, ಲಿಂಗಮೆನ್ನ ದೇವರ ಸಂಪುಟದ ಒಳಯಿಂಕೆಯಾಯ್ತು, ಗೆಲ್ದೆಂ ಗೆಲ್ದೆಂ ಸಂಕಲ್ಪಂ ನೇರ್ಪಾಯ್ತು" ಎಂದು ಸವಿಸವಿಯಾಗಿ ಕನಸಿನೊಳ್ ಬಾಳೆವಣ್ಣಂ ತಿನುತಿರ್ದಂ.

ಅನಿತರೊಳ್ ಜಾತ್ರಿಗಂ ಎಚ್ಚತ್ತು ನಿದ್ದೆವಾರದೆ ಜಗಲಿಯೊಳ ತ್ತಿತ್ತಂ ತಿರುಗುವಾಗಳ್, ಎಡವಿ ತಡವರಿಸಿ, ಶಿಣನೆಂದರಿತು ಬೆದರ್ದು ಇದೇನೋ ಅಪಾಯಸ್ಥಳಂ, "ಪರಂ ಪ್ರಾಣಭಯಂ ಮತಂ" ಎಂಬ ನುಡಿಯಿಂ ಇನ್ನಿಲ್ಲಿರಲಾಗದೆಂದೆಣಿಸಿ, ಆಚಣಮೆ ಪೇಳದೆ ಪೊರಟ್ಟೈದಿದಂ.

ತದನಂತರಂ ದೀಪಮಂ ತಂದು ನೋಳ್ಪುದುಂ ತನ್ನಣುಗನ ಶವಮನುಂ, ಯಾತ್ರಿಕನದೃಷ್ಟನಾದುದನುಂ, ಕಂಡರಿತಾ ಗೃಹಸ್ಥಂ "ಅನ್ಯಥಾ ಚಿಂತಿತಂ ಕಾರ್ಯಂದೈವಮನ್ಯದ್ಧಿಚಿಂತಯೇತ್ | ಕಾಶೀಲಿಂಗಾಪಹಾರೇಣ ಜ್ಯೇಷ್ಠಪುತ್ರೊ ವ್ಯತಿಂಗತಃ॥ ಇಾತೆಂದೆಡೆವಿಡದೆ ಮರುಗುತಿರ್ದಂಗಡ.

ಓ ಎನ್ನ ಸೊಬಗಿನ ಕಣಿ! ಏನೀಗಳೀಕತೆ ಕಿವಿವೊಕ್ಕುದೆ?

ಭಾರತಿ—ನಲ್ಲ! ಈಕತೆಯಂ ಕೇಳ್ವಾಗಳ್ ಕಿವಿ ಬೆರಲನೇ ಕರೆವುದು, ಅಕಟಾ! ಧರೆ ಸರ್ವಂಸಹೆಯಪ್ಪುದರಿನೆಂತಪ್ಪರೆಲ್ಲಂ ಇರ್ಕೆಗೈದಿರ್ಪರೊ! ಇಂತಿರ್ಪ ಪಾತಕಿಗಳ್ಗೆಂದೇ ಯಮಂ ಇನ್ನೊಂದು ನರಕಮಂ ಗೈಸದೆ ಮಾಣಂ. ಹುಂ ದುರುಳರ ಮಾತೇಕೆ? "ತಂತಮ್ಮ ತಲೆಯಡಿಗೆ ತಂತಮ್ಮ ಕೈಯಲ್ತೆ?" ಮುಂಗತೆಯಂ ಪೇಳ್.

ಕಬ್ಬಿಗರಣ್ಣಂ—ಕೇಳೆನ್ನ ಸವಿನುಡಿಗನ್ನೆ! ಬಳಿಯಂ ನಂದಂ "ಹಾಯ್ಕಿದ ಅಂಗಿ ಹಾರಿದೊಡೆ ಪೋಕುಮೆ?" ಎಂಬಂತೆ ಬರಿದೆ ಚಿಂತಿಸಿದೊಡೆ ಏಂ ಫಲಮೆಂದೆಣಿಸಿ ಆಳ್ಗಳಂ ಕರೆಯಿಸಿ—"ಎಲೆ ಚಾರರೆ! ಕೃಷ್ಣಂ ರಾಧೆಯ ಮನೆಯೊಳಿರಲ್ ಸಾಲ್ಗುಂ, ಅಲ್ಲಿಗೈದಿ ಆಂ ಪೇಳ್ದೆನೆಂದುಸಿರ್ದು ಅವನಂ ಕರೆತರ್ಪುದು" ಎಂದೊರೆಯುತಿರಲ್ ಆ ವಾಸುದೇವಂ ಕಿರುನಗೆಯಂ ಸೂಸುತೆ ನಡೆತಂದು ತಂದೆಯಡಿಗೆರಗುವುದುಂ,

ಒಡನಾನಂದಂ—(ಕಣ್ಣೊಳುರಿಯುಂ ನೀರುಮೊಡನೆ ಸೂಸೆ) ಎಲೆ ಕೃಷ್ಣ! ನೀನುದಿಸಿದುದರ್ಕೆ ತಾಯ್ತುಂದೆವಿರೆಮ್ಮ ತಲೆಗೆ ಪಾಲಂ ಕರೆದೆ, ಪೆಸರಂ ಪರ್ಬಿಸಿದೆ, 'ಪುತ್ರಾದಿಚ್ಛೇತ್ಪರಾಜಯಂ' ಎಂಬಂತೆ ನಿನ್ನಿಂ ಪರಾಜಯಮುಮಾಯ್ತು ಮೇಣೇಂ? ನಿನ್ನ ಪರಮಕೃತ್ಯಂಗಳಿಂ ಐಸಿರಿ ಯೊಳ್ ಎಂಟೇ ಕಡಮೆಯಾಗಿರ್ಕುಮಲ್ಲದೆ ಬೇರೆಲ್ಲಂ ತುಂಬಿರ್ಪುದು.

ಮಾಧವಂ—(ನಕ್ಕು) ಅಪ್ಪ! ನೀಂಪಿಸುಣರ ನುಡಿಯಂ ಕೇಳ್ದೆ ನ್ನಂ ಇಂತುಟು ಬೈವುದೇಕೆ? ಆನೇಗಳುಂ ತ್ರಿಕರಣದೊಳುಂ ಲೋಕೋ ಪಕಾರಮನಲ್ಲದೆ ತದ್ವಿರುದ್ಧಮನೆಣಿಸೆಂ.

ನಂದಂ—(ರೋಷಾವೇಶದಿಂ) ಚೀ ನಾಣಿಲಿ! ದುರ್ವೃತ್ತಿಯಂ ಗೈದ ದುರಿತಂ ಸಾಲದುದರ್ಕೆ ಪುಸಿಯನುಮುಸಿರ್ವೆಯ? "ನಾನೃತಾತ್ಪಾ ತಕಂ ಪರಂ" ಎನುತುಸಿರ್ದುದು "ಪುಸಿಯಿಂ ಪೆರ್ಚಿನ ದುರಿತವಿಲ್ಲಂ" ಎಂದ ರ್ಥಮುಂ ನೀಂಬಿತ್ತರಿಸುತಿರ್ದುದೆಲ್ಲಂ ಬೇಡನ ಸಂಗೀತಮಾಯ್ತು. ಅದ ರ್ಕೆ, ಆಂ ಪಿಸುಣಂ ಕೇಳ್ದೆನಾದೊಡೆ ದೇವರ್ಷಿ ನಾರದನೇ ಕೊಂಡೆಯ ನಾಯ್ತು.

ಕೃಷ್ಣಂ—ಏನಾ ಕಲಹಾಪ್ತನ ಮಾತೆ? ಆಯ್ತಾಯ್ತು.

ನಂದಂ—"ಮಕ್ಕಳ ಪರಿ ಚಿಕ್ಕಂದಿನೊಳೇ ತಿಳಿಗುಂ" ಎಂದೆನ್ನಟ್ಟೆ ಪೇಳ್ದುದು ಈಗಳುಂ ನೆನಂಬರಿಕೆಯಿರ್ಕುಂ, ಅದರಿಂ ನಿನ್ನ ಬಿಸಯಮ ನಾನಿನ್ನುಂ ತಿಳಿಯೆನೆ? ನೀನಿಂತೆಲ್ಲಂ ದುರಾಚಾರಕಡಿಯಿಡುವಾಗಳ್ ತಾಯ್ತುಂದೆವಿರೆಮ್ಮ ಕೊರಲ್ಗೆ ಪರಿಗತ್ತಿಯನಿಡುವ ಕಾರ್ಯಮತ್ಯುತ್ತಮ ಮಿರ್ದುದು,

ಕೃಷ್ಣಂ—ನಸುನಗುತಿರ್ದಂ,

ನಂದಂ—ಉಃ ಮೋರೆಯ ಪುರುಳೆ? ತನ್ನಂ ಬೈವಾಗಳುಂ ನಗು ವರ್ಗೆ ಎಂದುಂ ಬುದ್ಧಿವಾರದು, ದೂಷಣಮುಂ ಭೂಷಣಮಾದೊಡೆ ಮತಿಯೇಂ? ಹುಂ ನೀಚಂಗೆ ನೀತಿಯೆ?

ಆನಿನ್ನೆವರಂ ಇವಂ ಕಿರಿಯನೆಂದು ಸಲುಗೆಯಿತ್ತೊಡೆ "ಅಲ್ಪಂಗೆ ಐಸಿರಿವರೆ ಅರ್ಧರಾತ್ರಿಯೊಳ್ ಕೊಡೆವಿಡಿವಂ" ಎಂಬಂತೆ ನೀಂ ತಲೆಗೇರ್ದೆಯಲ್ತೆ? ನೋಡೀಗಳ್ ತಕ್ಕುದಂ ಮಾಳ್ಪೆಂ (ಎಂದು ಆಳ್ಗಳೊಳ್ ನೇಣ್ಗಳಂ ತರಿಸಿ, ಅಮಮಾ! ಸರ್ವವ್ಯಾಪಿಯುಂ ಮಾಯಾಪಾಶಕುಂ ಸಿಲ್ಕದ ಅನಾದಿವಸ್ತುವಂ ಬಂಧಿಸಲ್ಕೆ ಮನವಿಟ್ಟು, ಈ ದುರ್ಮಾರ್ಗಿಯುಂ ಕೃಷ್ಣನಂ ಬಂಧಿಸಿರಿಮೆಂದಾಣತಿಯಿತ್ತಂ,

ಆಗಳ್ ಶ್ರೀಕೃಷ್ಣಂ ನಿದ್ದೆಗಣ್ಗೆ ನೀರೆರೆದಂತೆ ಈತನ ಮೂಢತೆಗೆ ಇನಿಸುಂ ಮರ್ದಿಸಗುವೆನೆಂದೆಣಿಸಿ ಒಂದಚ್ಚರಿಯಂಗೈದಂ ಕೇಳೆನ್ನ ಸೌಭಾಗ್ಯತರಂಗಿಣಿ! ಆ ಭಟರ್ ಕಟ್ಟಲೆಂದು ಕೃಷ್ಣನೆಡೆಗೆ ಬರ್ಪುದುಂ ಕೃಷ್ಣರೆನಿಬರೊ? ಪಿಂದುಂ, ಮುಂದುಂ, ಎಡಮುಂ, ಬಲಮುಂ, ಎತ್ತೆತ್ತಮುಂ ಕೃಷ್ಣನೆ ಎಂದಾಯ್ತು.

ಒಡನೆ ಕೆಳಗುಂ ಮೇಲುಂ ನೋಳ್ಪ ಆಳ್ಗಳೊಳ್

ನಂದಂ—ನೀಮೇನುಂ ಕಣ್ಗೆಡದಿರಿಂ, ಇದೆಲ್ಲಮಾಕೃಷ್ಣನ ಕಣ್ಗಟ್ಟು. ಈ ಗುಟ್ಟನರಿದಪೆಂ, ಇದೋ ಇವನೇ ಕೃಷ್ಣಂ ಎಂದೊರ್ವನಂ ಕೈದೋರಿಸಿ ಪೇಳೆ, ಚಾರರ್ ಕೃಷ್ಣನನೊರ್ವನಂ ಪಿಡಿಯಲೊಡನವಂ ಅನ್ಯಾಕಾರಮಂ ಪೊರ್ದುವುದುಂ, ಬಳಿಯಂ ಮತ್ತೊರ್ವನಂ ಮುಟ್ಟಲ್ ಅವನುಂ, ಇಂತು ಪಲಂಬರುಂ ವಿಪರೀತಾಕೃತಿಯಂತಳೆವುದುಂ, ಬೆರಗಾಗಿಪ್ಪಾಗಳ್ ನಾರದನೈತಂದು, ಎಲೆ ನಂದ! ಇನ್ನಾನುಂ ಮರುಳ್ತನಮಂ ಬಿಡಯ್, ಆದಿಮಧ್ಯಾಂತರಹಿತಂ, ನಿರಂಜನಂ ಸ್ವಯಂ ಪ್ರಕಾಶಂ, ಪರಮಹಂಸಂ ಕೃಷ್ಣಂ, ಎಂದು ಬಗೆಗೊಳ್. ಎಮ್ಮನ್ನರ್ಗುಂ ಅಚಿಂತ್ಯ ಸ್ವರೂಪನಿವಂ ಏಸೋ ಕೆಸರೊಳ್ ತಾವರೆಯುದಿಸಿದಂತೆ ನಿನಗಣುಗನಾಗಿರ್ಪನೆಂದು ಕೇಳ್ಗೈವೆಯು? ಒರ್ಮೆಗೆ ಪರಮಾತ್ಮನೆಂದರಿಯದೆ ನಿಂದಿಸಿದೊಡುಂ ದುರಿತಮಲ್ಲದೆ ಮೇಲಿಲ್ಲಂ. ಏಂ ತಿಳಿಯದೆ ಮೇಲ್ವಾಯ್ವೆನೆಂದೊಡೆ ಕಡಲ್ ಮುಳುಗಿಸದೆ ಮಾಣ್ಗುಮೆ? ಎಂದು, ಇನ್ನುಂ ಪರಿ ಪರಿಯಿನು ಮಾ ಕೃಷ್ಣನ ಅಲೌಕಿಕಚರಿತ್ರಂಗಳನೆಲ್ಲಮಂ ಬಿರ್ಚಿಬಿತ್ತರಿಸೆ

ನಂದಂ—(ನಾರದನ ನುಡಿಯೊಳ್ ನಂಬುಗೆ ಪುಟ್ಟಿ) ನೀನೆಂದುದೆಲ್ಲಂ ಯೋಚಿಸಿದೊಡೆ ನಿಜಮೆಂದೇ ಕಾಣ್ಗುಂ. ಆದೊಡೆ ಪೂವಿನ ಸವಿಯಂ ತುಂಬಿಯರಿವುದಲ್ಲದೆ ಮರಮರಿಯದಂತೆ, ಕೃಷ್ಣನಂದವುಂ ನಿನ್ನನ್ನನಲ್ಲದೆ ಮೂಢನಾನೆಂತರಿವೆಂ? ಅದಿರ್ಕೆ, ಕೈಮೀರಿದ ಅಪರಾಧಕೇಂ ಗೈವೆಂ? ದುರಿತಾಂಬುಧಿಯು ನಿನ್ನೆಂತು ದಾಂಟುವೆಂ?

ನಾರದಂ—ಬೆದರದಿರ್, ಭಕ್ತರ ಪೊಗಳ್ಕೆಯುಂ, ಅಜ್ಞಾನದ ನಿಂದೆಯುಂ ನೀರ್ ಕಡಲನೆಂತಂತೆ ಇವನನೆ ಪೊರ್ದುಗುಂ. ಆದೊಡೆ ಕಲ್ಮಶಮಂ ದೂರೀಕರಿಸಿ ತಿಳಿನೀರನೆ ಒಳಂಗೊಂಬ ಸಾಗರದಂತೆ ಈತನು ಮೆಮ್ಮ ಅಜ್ಞಾನಮಂ ಪೋಗೊಳಿಸಿ ಪೊರೆವಂ. ಅದರಿಂ ತಪ್ಪಿತಮಾಯ್ತೆಂದು ಬೇಡು.

ನಂದಂ—ಆಯ್ತು ಬೇಡುವೆಂ, ಆದೊಡೆ, ನಿನ್ನಣುಗಂ "ಅಲ್ಲಿ ಪೊರಳ್ವಂ ನರಲ್ವಂ" ಎಂದುಸಿರ್ದ ಅವಿವೇಕಮಂ ಪೊರೆದು ಎನ್ನಂ ದುರಿತಾಶನನಂ ಗೆಯ್ಯಲಿಚ್ಛಿಸುವುದರಿಂ, ಕೃಷ್ಣನಂದಮನೆಲ್ಲಂ ಮನಂಬಿಟ್ಟು ಮೂಢಂಗೆನಗೆ ಮೊದಲೆ ಪೇಳ್ದಿರ್ದೊಡೆ ಅತಿ ಪುಣ್ಯಮಿರ್ದುದು. ಅಂತೆಸಗದುದರಿಂ ಎನ್ನ ಪಾಪಮುಂ ನಿನ್ನ ತಲೆಯೊಳೆ.

ನಾರದಂ—ಓ ದಾರಿದಪ್ಪಿದೆಂ. ಇರ್ಕೆ, ನಿನ್ನಿದಿರೊಳ್ ಅಂತಪ್ಪುವುದೇಂ ದೊಡ್ಡಿತೆ? ಕೃಷ್ಣನೆನಗಜ್ಜಂ, ನೀನವಂಗುಮಪ್ಪಂ, ಮುತ್ತಜ್ಜಂ. ಅದರಿಂ ಯೋಚಿಸಿದೊಡೆ ಕಿರಿಯನೊಳೆನ್ನೊಳ್ ತಪ್ಪಂ ಪಿಡಿವ ನೀನೇ ತಪ್ಪುಗಾರಂ.

ನಂದಂ—ಮರದಂತೆ ಬೆಳೆದ ಮೂಢನನಿಂತೆಲ್ಲಂ ಹಾಸ್ಯಂಗೆಯ್ಯವಿರ್.

ನಾರದಂ—"ನೀಂ ತಪ್ಪಿದುದರ್ಕೆಲ್ಲಂ ನೀಂ ಮೂಢಂ, ಎನ್ನೊಳ್ ತಪ್ಪಂ ಪೊರಿಸುವ ಸಯುಕ್ತಿವಚನಂಗಳ್ಗೆ ಏಂ ಮೂಢನಲ್ಲವೆ? ಸಾಲ್ಗುಂ, ಸಾಲ್ಗುಂ, ಜಗತ್ಪಿತನಿದಿರೊಳ್ ಮಕ್ಕಳಾಟಿಕೆಯೆಲಂ. "ದೈವಾಧೀನಂ

ಜಗತ್ಸರ್ವಂ" ಎಂಬುದರಿಂ ಸರ್ವಂ ಸರ್ವಾತ್ಮನಾಯತ್ತಮೆಂದರಿವುದು. ಮೇಣಿದೆಲ್ಲಂ ಇವನ ಮಾಯಾಲೀಲೆಯಲ್ಲದೆ ಬೇರೇನುಮಲ್ಲಂ" ಎಂದಂ.

ಬಳಿಯಂ ನಂದಂ ಕೃಷ್ಣಂಗೆರಗಿ ಪರಿಪರಿಯಿಂ ನುತಿಸಿದಂ. ಕೃಷ್ಣನುಂ ತನ್ನ ಮಾಯೆಯುಂ ಬಿಟ್ಟು ನಂದಂಗೆ ಅಭಯಂಗೆಯ್ದಂ.

ನಾರದಂ—"ಓ ಸಂಸಾರ ನಾಟಕ ಸೂತ್ರಧಾರ! ಕಜ್ಜಮಿದೋಡೆ ಇನ್ನೊರ್ಮೆ ಪಾರಿಪಾರ್ಶ್ವಕನಪ್ಪೆಂ" ಎಂದು, ನಗುಮೊಗದ ರಮಾಧವನಪ್ಪಣೆಯುಂ ತಾಳ್ದು ಕಾರ್ಯಾಂತರಾಭಿಮುಖಂ ಮೇಲಡರ್ದಂ.

ಪರಮಾತ್ಮಂ ಶ್ರೀ ಕೃಷ್ಣಂ ನರನಾಟಕಮನಚ್ಚರಿಯಾಗೆ ತೋರುತಿರ್ದಂ. ಆ ವಾಸುದೇವನ ಕಜ್ಜಮೆಲ್ಲಂ ಲೋಕೋಪಕಾರಂ ದೃಷ್ಟಾಂತಮೆಂದರಿವುದು. ಅಲ್ಲದೊಡೆ ಮತ್ಸ್ಯಾದ್ಯವತಾರಂಗಳಂ ತಾಳಲ್ವೇಳ್ಕುಮೆಂದೇಂ ತಲೆವೊರೆಯೆ? ಆದಿರ್ಕೆ. ಕೃಷ್ಣಂ ದೈವಮಲ್ಲಮೆಂದೆಂಬ ರೋಗಕೆ ಆತನ ಅಮಾನುಷಕೃತ್ಯಮೆ ಮದರ್ಲ್ತೆ? ಮೇಣ್ ಕವಲೆಣಿಸಿ, ಕೃಷ್ಣಂ ಗೆಯ್ದನೆಂದು ಅಂತಿಂತೆಸಗಿದೊಡೆ, ಪಾವಿನ ಪೆಡೆಯನುಂ ಮೆಟ್ಟಲ್ವೇಳ್ಕುಂ. ಏಂ ಮನಮಿಟ್ಟಾಲಿಸಿದೆಯಲ್ತೆ? ಎನ್ನಾನಂದವಲ್ಲಿರಿ!

ಭಾರತಿ—ಆಲಿಸಿದೆಂ, ಮತ್ತೇಂ?

ಕಬ್ಬಿಗಂ—ಮತ್ತೇಂ? "ಇತಿ ಶ್ರೀ" ಎಂಬ ಕಾಲಮುಂ ಸಂಭವಿಸಿತು.

ಭಾರತಿ—ಏಂ ಸಂಪೂರ್ಣಂ?

ಕಬ್ಬಿಗಂ—ಹುಂ.

ಭಾರತಿ—ಊಃ, ಎನಗೇನುಂ ದಣಿವಾದುದಿಲ್ಲಂ.

ಕಬ್ಬಿಗಂ—ದಣಿಯಲದೇಂ ಪೊರೆಯೆ?

ಭಾರತಿ—ಅಂತಲ್ಲಂ. ಕೇಳ್ವಾಸೆಯಿಂ ಮನಂದಣಿದುದಿಲ್ಲಂ.

ಕಬ್ಬಿಗಂ—ಇದೇಕೀಪರಿಯ ಪರಿಹಾಸ್ಯಂ? ಕತೆಯೊಳ್ ಸವಿಯಿ ರ್ದೊಡಲ್ತೆ ಕೇಳಲ್ಕಾಸೆ?

ಭಾರತಿ—ಏಂ ಸವಿಯಿಲ್ಲವೆ? ಕಡಲೊಳ್ ನೀರಿಲ್ಲದೊಡೆ ನಿನ್ನ ಕತೆಯೊಳ್ ಸವಿಯುಮಿಲ್ಲವೆಂದಕ್ಕುಂ.

ಕಬ್ಬಿಗಂ—ಅಂತಾದೊಡೆ ಕಡಲ ಜಲದಂತೆ ಕತೆಯೊಳುಂ ಪುರು ಳಲ್ತೆ?

ಭಾರತಿ—ಅದರ್ಕೇಂ ಸಂದೆಯಂ?

ಕಬ್ಬಿಗಂ—(ನಕ್ಕು) ಆದೊಡೆ ಸಾಗರವಾರಿಯಂತೆ ಕತೆಯೊಳ್ ಸವಿಯುಪ್ಪು. (ನಕ್ಕು) ಹುಂ ಒಳ್ಳಿತನುಸಿರ್ದೆ "ಲವಣಂ ಬಲವರ್ಧನಂ" ಎಂಬರಲ್ತೆ ಪಿರಿಯರ್.

ಭಾರತಿ—ಇಸ್ಸಿ ಇದೇತರ ನುಡಿ? ಅಂ ಕವಲೆಣಿಸದೆ ಅಂಬುಧಿ ಜಲದಂತೆ ಕತೆಯೊಳ್ ಸವಿದುಂಬಿರ್ಕುಮೆಂದೊಡೆ, ಪೆಣ್ಣಿನ ಮಾತಿನೊಳುಂ ಇತರಾರ್ಥಮಂ ಪುಡುಕಿ ನಾಡ ಕಬ್ಬಿಗರ ಲಚ್ಚಣಮಂ ಪೊಳೆಯಿಪ ನಿನ್ನಂದಕೇನೆಂಬೆನೊ!

ಕಬ್ಬಿಗಂ—ಆ ನುಡಿಯಿರ್ಕೆ, ಎಂತಿರ್ದೊಡುಂ ಈಗಳೀಕನ್ನಡಮಂ ನೋಳ್ಪರ್ಗೆ ಪೆರ್ಚುಂ ಕಣ್ಣೋವಲ್ತೆ? ಅಂತುಮಲ್ಲದೆ ಶಯ್ಯೆಯ ಪಳೆ ಗನ್ನಡವಾಸೆಯಾಗಿರಲ್ ಇದಂ ನೋಡಲಾರ್ ಒಳವುಗುವರ್? ಸವಿಯಿ ರ್ದೊಡು ಮೆಂತರಿವರ್?

ಭಾರತಿ—ಅಂತೆಣಿಸದಿರ್. ಬಾಸೆಗಳೆಲ್ಲವುಂ ಆಂತರ್ಯಸಾರಮಂ ಪೊರಡಿಸುವ ನಲ್ದಾರಿಗಳಾಗಿರಲ್ ಕನ್ನಡಮಾದೊಡದೇಂ ಕುಂದು? ಮೇಣುಂ ಶಯ್ಯೆಯ ಪಳೆಗನ್ನಡಮುಮಾಗಿರಲ್ "ಪಳೆಗೈ ಪಾಕಂ ಪೊಸಗೈ ಪೋಕಂ" ಎಂಬ ನಾಣ್ಣುಡಿಯಂತೆ ಪೋಲ್ ಒಳ್ಳಿದರಾದವರ್ ನೋಡಿ ಮುದ ಮಾನದಿರರ್. ತಲೆದಿರುಗಲ್ ಊರೇ ತಿರುಗುವುದೆಂಬಂತೆ ದುಟ್ಟರೇನಂ

ದೊಡೇಂ? ಎಣಿಕೆಯುಂ ಮರೆಯಿಪ ಕವಲ್ನುಡಿಯ ನೆವಮೆಲ್ಲಮಿರ್ಕೆ, ಏನಿನ್ನಾನುಂ ಕತೆಯುಂ ಪೇಳ್ದೆನ್ನ ಆಸೆಯುಂ ಪೂರ್ತಿಪೆಯ?

ಅಣ್ಣಂ—ಕತೆಯೋ ಪೂರ್ತಿಯಾಯ್ತು, ನಿನ್ನಾಸೆಯ ಪೂರ್ತಿಗೆ ಇನ್ನೇಂ ಮಂತ್ರವಾದಂಗೆಯ್ವೆನೊ?

ಭಾರತಿ—ಉಃ ಮಾತಿನ ಪುರುಳ್! ಮನಮಿರ್ದೊಡೆ ಇದಲ್ಲದೊಡೆ ಇನ್ನೊಂದು ಕತೆಯುಂ ಪೇಳಲಾಗದೆ?

ಕಬ್ಬಿಗಂ—ಇದರ್ಕೆ ಮಂಗಳಮಂ ಗೆಯ್ಯದೆ ಇನ್ನೊಂದೆ? ಏನೆರ ಳ್ದೋಣಿಗಳೊಳ್ ಕಾಲಿಟ್ಟವನ ಗತಿಯನರಿಯೆಯ?

ಭಾರತಿ—ಎರಳ್ದೋಣಿಗಳೊಳ್ ಕಾಲಿಟ್ಟಂಗೆ ಅಧೋಗತಿಯಕ್ಕುಂ ಈಗಳಿದರ್ಕೆ ಮಂಗಳಂ ಗೆಯ್ಯದೊಡೆ ನಿನಗೇನಕ್ಕುಂ?

ಕಬ್ಬಿಗಂ—ಕಲ್ಯಾಣಮಾಗದು.

ಭಾರತಿ—ದುಗುಡದಿಂ ನಿನಗಿನ್ನುಂ ಕಲ್ಯಾಣಮೆ?

ಕಬ್ಬಿಗರೆರೆಯಂ—ಇದೇಂ ವೈಕಲ್ಯಂ? ಚಿಂತಿಸದಿರ್, ಎನಗಾ ದೊಡೆ ನೀನುಂ ಕಲ್ಯಾಣಮಂತಳೆವೆ.

ಭಾರತಿ—ಇಸ್ಸಿ! ಸಾಲ್ಗುಂ ಏನೀಗಳ್ ಪೆಣ್ಗಳ್ಗಂ ಕಲ್ಯಾಣಮೆ ರಡೆಂಬುದು ತಲೆದೋರಿತೆ?

ಕಬ್ಬಿಗಂ—ಚಿಃ ಇದೇತರೆಣಿಕೆ? ಕತೆಗೆ ಮಂಗಳಮೆಸಗಿದೊಡೆ ಎನ್ನೊಡನೆಯೆ ಅರ್ಧಾಂಗಿಯಪ್ಪ ನಿನಗುಂ ಕಲ್ಯಾಣಂ (ಮಂಗಳಂ) ಅಕ್ಕುಂ. ಎಂಬೆಣಿಕೆಯೊಳುಸಿರ್ದೊಡೆ ನೀಂ ಭಾರತಿಯಾಗಿಯುಂ ಅಸಂಬದ್ಧಾರ್ಥ ಸಂಗ್ರಹಮಂ ಮಾಳ್ಪುದೆಂದೊಡೆ ಏಂ ಪೇಳ್ವುದು?

ಭಾರತಿ—ಅರಿಯದೆ ಪೇಳ್ದ ಅಪರಾಧಮಂ ಕ್ಷಮಿಸು (ಎಂದೆರ ಗಿದಳ್.

ಕಬ್ಬಿಗಂ—(ತೆಗೆದೆತ್ತಿ) ನಿನ್ನಿಂದಮೆ ಆಂ ಸಧಾರ್ಯನಾಗಿರಲ್ ನಿನ್ನೊಳ್ ಅಪರಾಧಮೆ? ಅದಿರ್ಕೆ, ಈಗಳ್ ಬೇರೆ ಕಜ್ಜಮಿರ್ಪುದರಿಂ ಮಂಗಳಮೆಸಗಿ ಪ್ರೀತಿಪೆಂ. ಇನ್ನೊಂದು ಕತೆಯನಿನ್ನೊರ್ಮೆ ಪೇಳ್ವೆನೇ ನಾಗದೆ?

ಭಾರತಿ—ಅಂತಕ್ಕೆ ಅಬಲೆಯೊಳ್ ದಾಕ್ಷಿಣ್ಯದಿ ನಾನುಂ ನಿನ್ನ ನಲ್ಮೆಯೋಗಳುಮಿರ್ಕೆ.

ಕಬ್ಬಿಗಂ—ಉಪಚಾರಂ ಸಾಲ್ಗುಂ. ನಿನ್ನ ಪ್ರೇಮಪಾಶದಿಂ ಕಟ್ಟೆಪಡೆದು ಆನೇ ನಿನ್ನ ಅಧೀನನಲ್ತೆ.

ಭಾರತಿ—ಇದೇತರ ನುಡಿ? ಆ ಸವಿನುಡಿಯೊಳ್ ಲೋಲುಪಳಾಗಿ ಆನೇ ನಿನ್ನಂ ಬೆಂಬಿಡದಿರ್ಪೆನಲ್ತೆ?

ನಲ್ಗಬ್ಬಿಗಂ—ಎಂತಾನುಮಕ್ಕೆ ನಮ್ಮ ಅನ್ಯೋನ್ಯ ಪ್ರೇಮಮೆ ಧನಮುಂ, ಧಾನ್ಯಮುಂ, ಮಳೆಯುಂ, ಬೆಳೆಯುಮಕ್ಕೆ, ನಮ್ಮ ನೇಹಮಿದು ಜನ್ಮಜನ್ಮಂಗಳೊಳುಮಿರ್ಕೆ.

ಭಾರತಿ—ನಲ್ನುಡಿಯನುಸಿರ್ದೆ. ನಿನಗೆ ಕೀರ್ತಿಯುಂ ಐಸಿರಿಯು ಮೆಲ್ಲೆಲ್ಲುಂ ಪರ್ಬುವಂತೆ ಎನ್ನ ಪೆಸರಿನ ಪ್ರಾರ್ಥನಾಪದ್ಯಮೊಂದಂ ಪೇಳ್.

ಕಬ್ಬಿಗಂ—ಅಕ್ಕೆ, ಕಂದಂ||

ವಿಯದಂತಂ ತುಂಬುಗೆ ಕೃತಿ
ಗೆಯುಶಂ ಶ್ರೀ ವೇಣುನಾಥದಯದೆ ಸುಧರ್ಮ ||
ಪ್ರಯತಂ ಸಂತಸದೆ ಬಿಲೀ
ಶಯಭೂಷಿತವೇಷನೀಗೆ ಭೂತಿಯನೀಶಂ ||

ಭಾರತಿ—ಒಳ್ಳಿತಾಯ್ತು, ನಿನ್ನ ಪೆಸರ್ ಬಿಸುತಣ್ಗದಿರರಿಪ್ಪನ್ನೆವರಂ ಕಡೆಗುಳಿಗೆ.

ಕಬ್ಬಿಗಂ--ನಿನ್ನ ಕಡೆಗಣ್ಣೋಟಮುಂ ಕೃತಿಯೊಳೀಗಳುಮಿರ್ಕೆ. ಇದೋ ಮಂಗಳಮೆತ್ತುವೆಂ.

ಭಾರತಿ--ಅಕ್ಕೆ.

ಕಬ್ಬಿಗರಾಳ್ದಂ—

ಕಂ|| ಕಾಲದೆಮಳೆ ಬರ್ಕೆನೆಲಂ
ಲೀಲೆಯ ಬೆಳೆ ಬಾಳ್ಕೆಗಳಿನೆ ತುಂಬುಗೆ ಭೂಪಂ |
ಮೇಲೆಸಗುಗೆ ಲೋಕಕೆ ಕವಿ
ಲೋಲಮುಖಾಂಬುಜದೆ ವಾಣಿ ನೆಲಸುಗೆನಿಚ್ಚಂ ||

ಬಳಿಯಂ, ಸಂತಸದಿಂ ತವೊಮ್ಮೆಳೆರಕಮಿರ್ದರ್

ಎಂಬಲ್ಲಿಗೆ ಚಂದ್ರಾವಳೀ ವಿಲಾಸದೊಳ್ ಪಂಚಮಾಶ್ವಾಸಂ ಸಂಪೂರ್ಣಂ. ಇತಿಶ್ರೀ.



# ಶುದ್ಧಾಶುದ್ಧ ಪತ್ರಿಕೆ.



| ಪುಟ. | ಪಙ್ಕ್ತಿ. | ಅಶುದ್ಧ. | ಶುದ್ಧ. |
|---|---|---|---|
| 3 | 25 | ಆಗಲ್ಬೇಳ್ಕು | ಆಗಲ್ವೇಳ್ಕು |
| 6 | 9 | ನಡ | ನಡು |
| ,, | 13 | ನೋಡ | ನೋಡ, |
| ,, | 21 | ಪ್ಯೊಮಾಲೆ | ಒಯ್ಯಾಲೆ |
| 8 | 12 | ಹಿಮಕರು | ಹಿಮಕರ |
| 9 | 15 | (ಕಿವುಡಂಗೆ ಡವುಡೆಯೆ) | "ಕಿವುಡಂಗೆ ಡವುಡೆಯೆ" |
| 11 | 13 | ಎಮ್ಮ | ಎನ್ನ |
| 12 | 22 | ಗುಣವರ್ಮನೆಂಬವ | ಗುಣವರ್ಮನೆಂಬವಂ |
| 14 | 20 | ಇರಲ್ಪೇಳ್ಕು | ಇರಲ್ವೇಳ್ಕು |
| 15 | 8 | ತಿರುಂಗು | ತಿರುಗು |
| 17 | 18 | ಕೆಳದಿಯರ್ಕಾಳಾದಿ | ಕೆಳದಿಯರ್ಕಳಾದಿ |
| 19 | 11 | ಒಡನಾಸುದೇವಂ | ಒಡನಾ ವಾಸುದೇವಂ |
| ,, | 16 | ಲತಾಂಗಿಯಲ್ಗೆ | ಲತಾಂಗಿಯರ್ಗೆ |
| 21 | 4 | ಬಿಸುಂಟಂ | ಬಿಸುಟಂ |
| 22 | 16 | ನಿಮಗೆಂದೇ | ನಿಮಗೆಂದು |
| 25 | 21 | ಔರ್ದ್ವದೈಹಿಕವೆ? | ಔರ್ಧ್ವದೈಹಿಕವೆ? |
| 27 | 20 | ಚಂದಾ | ಚಂದ್ರಾ |
| ,, | 21 | ವಳಿಯೊಳಿರ್ವ | ವಳಿಯೊಳಿರ್ಪ |
| 30 | 9 | ಶಂಖಂ | ಶಂಖ |
| ,, | 16 | ಗುಣಂ | ಗುಣ |
| 31 | 23 | ಅಸ್ಪಷ್ಠ | ಅಸ್ವಾಸ್ಥ್ಯ |

| ಪುಟ. | ಪಙ್ಕ್ತಿ. | ಅಶುದ್ಧ. | ಶುದ್ಧ. |
|---|---|---|---|
| 32 | 3 | ಕಣ್ಮುರ್ಚಿ | ಕಣ್ಮುಚ್ಚಿ |
| ,, | 11 | ತುಡಿಯು | ತುಟಿಯು |
| ,, | 19 | ಪ್ರಸಂಗವರಿದಿಂ | ಪ್ರಸಂಗವಶದಿಂ |
| ,, | 25 | ಇಳಿಂಕೆ | ಇಳಿಕೆ |
| 34 | 13 | ಎಳ್ತರ | ಏಳ್ತರ |
| 37 | 11 | ("ಒಳಗಣಗುಟ್ಟಂ ಶಿವನೇ ಬಲ್ಲಂ") | "ಒಳಗಣ ಗುಟ್ಟಂ ಶಿವನೇ ಬಲ್ಲಂ |
| 39 | 11 | ಒಡನಾಸುಮುಖಿ | ಒಡನಾ ಸುಮುಖಿ |
| 40 | 19 | ಗೆಯ್ಗುಂ | ಗೆಯ್ಗುಂ |
| ,, | ,, | ಏನ | ಎನ |
| 42 | 4 | ಸಿರೆ | ರಸಿ |
| ,, | 5 | ಬರ | ಬರೆ |
| ,, | 8 | ರಾತ್ರಿಯಂ | ರಾತ್ರಿಯುಂ |
| 44 | 19 | ದೊಡೆಂ | ದೊಡೇಂ |
| 45 | 8 | ಆಂ | ಆ |
| 46 | 21 | ಪುರ್ಚೆ? | ಪುಚ್ಚೆ? |
| 47 | 5 | ಪಾಸಾಟಿ | ಪಾಸಟಿ |
| 48 | 11 | ತೋರಲ್ಕೇ | ತೋರಲ್ಕೆಯೆ |
| 51 | 15 | ಪೋಳ್ತುಂ | ಪೊಳ್ತುಂ |
| ,, | 23 | ಪೆಣ್ಗೊಳ್ | ಪೆಣ್ಣೊಳ್ |
| 52 | 15 | ಗೆಯೆ | ಗೆ |
| 54 | 2 | ಗದ್ಧಗೆ | ಗದ್ದುಗೆ |
| 56 | 15 | ಆನೆಯೆ | ಆನೆ |
| 57 | 10 | ರೋಷಾವೇಷದಿಂ | ರೋಷಾವೇಶದಿಂ |
| ,, | 14 | ಕಣ್ಣಟ್ಟಿದ | ಕಣ್ಗಟ್ಟಿದ |
| ,, | 16 | ಮೆಣೆನಗೇಕೆ | ಮೇಣೆನಗೇಕೆ |

| ಪುಟ. | ಪಙ್ಕ್ತಿ. | ಅಶುದ್ಧ. | ಶುದ್ಧ. |
| --- | --- | --- | --- |
| 58 | 24 | ಕಾಳ್ಗಿರ್ಚಿಗೆ | ಕಾಳ್ಕಿಚ್ಚಿಗೆ |
| 63 | 19 | ನಂದಗೆ | ನಂದಂಗೆ |
| 64 | 18 | ಅಪವಾದರೋಪಣೆಯೆ? | ಅಪವಾದಾರೋಪಣೆಯೆ? |
| 70 | 13 | ನುಡಿಯು | ನುಡಿಯುಲಾರ್ |
| 76 | 24 | ಮವೆಯುವಂ | ಮನೆಯುವಂ |
| ,, | 25 | ಅಶನಧ್ವಂಸಿಯು | ಅಶನಧ್ವಂಸಿಯು |
| 77 | 14 | ಊರ್ದ್ವಗತಿಯುಂ | ಊರ್ಧ್ವಗತಿಯುಂ |
| 81 | 21 | ಮಕ್ಕಳಾಟಿಕೆಯೆಲಂ | ಮಕ್ಕಳಾಟಿಕೆಯೆಲ್ಲಂ |
| 82 | 14 | ವಲ್ಲಿರಿ | ವಲ್ಲರಿ |
| 84 | 12 | ದುಗುಡದಿಂ | (ದುಗುಡದಿಂ) |
| ,, | 20 | ಪೇಳುದು? | ಪೇಳ್ವುದು? |

ಒಂದು ಕಡೆಯಲ್ಲಿ ಬರೆಯಲ್ಪಟ್ಟ ಶುದ್ಧಾಶುದ್ಧಗಳನ್ನು ನೋಡಿ ಆ ರೀತಿಯು ಶುದ್ಧಾಶುದ್ಧಗಳನ್ನು ಇತರ ಭಾಗಗಳಲ್ಲೂ ಇಳಿಯತಕ್ಕುದು.

